ಶ್ರೀ ಮಾಲತೀಶಾರ್ಪಿತ ಷಷ್ಠಮ ಕುಸುಮ.

# ಶ್ರೀರಾಮಕೃಷ್ಣ

# ಸದ್ಬೋಧ-ಸುಧಾ.


ಲೇಖಕ:—

ಗೋವಿಂದ ಹಣಮಂತ ಹೊಸೂರ,

ಕರ್ನಾಟಕ ವಿದ್ಯಾವಿನೋದಿ.



ಪ್ರಕಾಶಕ:—

ಮುರಹರ ರಾಮಚಂದ್ರ ಶಿವಪೂಜಿ,

ಮಾಲತೀಶಾರ್ಚಕ, ಮು. ದೇವಗಿರಿ, ಜಿ. ಧಾರವಾಡ.

೧೯೨೮.

ಬೆಲೆ ೩ ಆಣೆ.

ಶ್ರೀ ಮಾಲತೀಶಾರ್ಪಿತ ಷಷ್ಠಮ ಕುಸುಮ.

# ಶ್ರೀರಾಮಕೃಷ್ಣ

# ಸದ್ಬೋಧ-ಸುಧಾ.


ಲೇಖಕ:—

ಗೋವಿಂದ ಹಣಮಂತ ಹೊಸೂರ,

ಕರ್ನಾಟಕ ವಿದ್ಯಾವಿನೋದಿ.





ಪ್ರಕಾಶಕ:—

ಮುರಹರ ರಾಮಚಂದ್ರ ಶಿವಪೂಜಿ,

ಮಾಲತೀಶಾರ್ಚಕ, ಮು. ದೇವಗಿರಿ, ಜಿ. ಧಾರವಾಡ.





ಮುದ್ರಕ:—

ಭಿ. ಪ. ಕಾಳೆ, ಮ್ಯಾನೇಜರ, ಶ್ರೀಶೇಷಾಚಲ ಪ್ರೆಸ್ಸ, ಆನಂದವನ.

೧೯೨೮.





ಬೆಲೆ ೩ ಆಣೆ.

## ಮಾಲತೀಶನ ಪ್ರಾರ್ಥನಾ ಪದ್ಯ.



ಜಯವಂತನಾಗಯ್ಯ ಪರ ಬೊಮ್ಮ ರೂಪ ||
ಭಯನೀಗಿ ಭಕ್ತರನೆ ಕಾಯ್ವಂಥ ಭೂಪ ||

ಮೈಲಾರದಲ್ಲಿರುವಿ | ಕೈಲಾಸದಲ್ಲಿರುವಿ |
ಬಲ್ಲವರ ಹೃದಯದಲಿ ನೀನಿರುವಿಯೋ ||
ಜೊಳ್ಳುಮಾತಿನೊಳೇನು ? | ಎಲ್ಲ ಕಡೆಯಲಿ ಸತತ |
ಬಲ್ಲಿದನೆ ಪರಮಾತ್ಮ ನೀನಿರುವಿಯೋ ||

ಹುಟ್ಟುವದು ಸಾಯುವದು | ಸೃಷ್ಟಿಯಲಿ ಸಹಜಾಗಿ |
ದುಷ್ಟಾತ್ಮರನುಭವಕೆ ಬಿಡದಾಯಿತೇ ||
ಎಷ್ಟು ಪೊಗಳಿದರೆನ್ನ | ಕಷ್ಟದೂರಾಗುವದೊ? |
ಸೃಷ್ಟೀಶ ನಿನ್ನಡಿಯ ದಾಸನೆನಿಸೋ ||

ನಾಣ್ಯದಾಶೆಯೊಳೀಗ | ಪುಣ್ಯವರ್ಜ್ಯವೆಯಾಯ್ತು |
ಕಣ್ಣಿದ್ದ ಕುರುಡರನೆ | ಕೈಬಿಡದಿರೋ ? |
ಹೆಣ್ಣುಮಣ್ಣಿನೊಳೇನು | ನಿನ್ನಂತೆ ಸುಖವುಂಟೆ? |
ಇನ್ನೆಷ್ಟು ಯಾಚಿಸಲಿ | ನಿನ್ನಂಘ್ರಿ ತೋರೋ ||

ಎಲ್ಲೆಲ್ಲೊ ತಿರುಗುತ್ತ | ನಿಲ್ಲದಲೆ ಬೇಸತ್ತು |
ವಲ್ಲಭನೆ ನೀನಿದ್ದ ತಳಕೈದಿದೇ ||
ಎಲ್ಲೇನು ಕಣ್ದೆರೆಯೆ | ಲಲ್ಲಾಯಗ್ವೆ ಯುಧೃತನು |
ಬಲ್ಲಿದನು ನೀನಹುದೊ ಮಲ್ಲಾರಿಯೇ ||

ಸುರಗಿರಿಯೊಳಿರುತಿರ್ಪ | ಸುರಭೂಜ ಸುಂದರನೇ |
ಕರವೆತ್ತಿ ಶಿರಬಾಗಿ ನಾಬೇಡಿಕೊಂಬೇ ||
ಉರಗೆ ಭೂಷಣನಾಗಿ | ವರಚಂದ್ರಧರನಾಗಿ |
ಗಿರಿಜಾತೆಯೊಡಗೂಡಿ ಮೈದೋರೆಲೋ ||

---



# ಅರ್ಪಣಪತ್ರಿಕೆಯು.

—ಮಾತೃ ದೇವೋ ಭವ—



"ಯಾರು ನನ್ನನ್ನು ನವಮಾಸಗಳ ವರೆಗೆ ಉದರದಲ್ಲಿ ಧರಿಸಿ ಜನ್ಮವಿತ್ತರೋ, ಯಾರು ನನ್ನಿಂದೊದಗಿದ ಅನೇಕ ಕಷ್ಟಗಳನ್ನು ಪುತ್ರವಾತ್ಸಲ್ಯಾತಿರೇಕದಿಂದ ಸಹಿಸಿ, ಮುದ್ದಿಟ್ಟು ಮುಂದಾಡಿ ದೊಡ್ಡವನನ್ನಾಗಿ ಮಾಡಿದರೋ, ಯಾರು ನನ್ನ ಹೃದಯದಲ್ಲಿ ಜ್ಞಾನದ ಬೀಜಾರೋಪಣಮಾಡಿ ಸೃಷ್ಟಿಯಲ್ಲಿ ವ್ಯವಹರಿಸಲು ಮಾರ್ಗಮಾಡಿಕೊಟ್ಟರೋ,

ಆ

ಪುಣ್ಯಾತ್ಮರೂ, ಪುತ್ರವಾತ್ಸಲ್ಯಯುತರೂ, ಸದಯಾಂತಃಕರಣಿಗಳೂ, ಸತ್ಕರ್ಮನಿರತರೂ, ನನ್ನನ್ನು ಅನಂತ ಋಣಿಮಾಡಿದವರೂ ಆಗಿದ್ದ

ನನ್ನ ಪರಮಪೂಜ್ಯ ಮಾತೋಶ್ರೀಯುವರಾದ

## ಕೈ. ವಾ. ಗಂ. ಭಾ. ವೆಂಕಮ್ಮನವರ

ಚರಣಕಮಲಗಳಲ್ಲಿ ಈ ಪುಸ್ತಕವನ್ನು ಪ್ರಸಿದ್ಧಿಸಿ, ಮಾತೃಭಕ್ತಿಯ ಅತಿರೇಕದಿಂದ ಅರ್ಪಿಸಿರುವೆನು."

ಮು. ರಾ. ಶಿವಪೂಜಿ.

ಪ್ರಸಿದ್ಧಕರ್ತಾ.

———

# ಲೇಖಕನ ಹೃದ್ಗತ!

ಭಗವಾನ್ ರಾಮಕೃಷ್ಣ ಪರಮಹಂಸರ ಪುಣ್ಯಸ್ಮರಣವು ಭವತಾರಕವೂ ಇಹ-ಪರಸಾಧನೆಗೆ ಸುಲಭಸಾಧನವೂ ಆಗಿರುವದು. ಕಾರಣ ಮಾಲತೀಶನ ಭಕ್ತರೂ, ಆಧ್ಯಾತ್ಮಪ್ರೇಮಿಗಳೂ, ಆದ ನಮ್ಮ ಕನ್ನಡ ಬಾಂಧವರಿಗೆ ಈ ಪುಣ್ಯ ಶ್ಲೋಕಿಗಳ ಆಧ್ಯಾತ್ಮಬೀಜದ ಮರ್ಮವು ಸುಲಭ ರೀತಿಯಲ್ಲಿ ತಿಳಿಯಬೇಕೆಂಬ ಕುತೂಹಲದಿಂದ ಈ ಪುಸ್ತಕವನ್ನು ಬರೆಯುವ ಸಾಹಸ ಮಾಡಿರುವೆವು. ಇದನ್ನು ಶ್ರೀಮತ್ ಸ್ವಾಮಿವಿವೇಕಾನಂದರ ಸಮಕಾಲೀನರೂ ಸಮಾನರೂ, ಶ್ರೀರಾಮ ಕೃಷ್ಣ ಪರಮಹಂಸರ ಕೃಪಾಪಾತ್ರ ಶಿಷ್ಯರೂ, ಬೇಲೂರ ರಾಮಕೃಷ್ಣ ಮಠದ ಅಧ್ಯಕ್ಷರೂ ಆದ ಬ್ರಹ್ಮೀಭೂತ **ಸ್ವಾಮಿ ಬ್ರಹ್ಮಾನಂದರು** ಬಂಗಾಲೀ ಭಾಷೆ ಯಲ್ಲಿ ಬರೆದು ಪ್ರಸಿದ್ಧಿಸಿರುವರು. ಈ ಪುಸ್ತಕವು ಪ್ರಾಸಾದಿಕ ಗ್ರಂಥವಾದ "ಶ್ರೀರಾಮಕೃಷ್ಣ ಉಪದೇಶ" ಎಂಬ ಆ ಬಂಗಾಲೀಗ್ರಂಥದ ಕನ್ನಡ ಅನುವಾದ ವಿರುವದು. ಅಂದಮೇಲೆ ಗುರುಕೃಪಾಪಾತ್ರರಾದ ಆ ಮಹಾಮಹಿಮರ ಪ್ರಾ-ಸಾದಿಕ ಲೆಕ್ಕಣಿಕೆಯಿಂದುದಿರಿದ ಅಮೃತಬಿಂದುಗಳ ಸವಿಯನ್ನೇನು ವರ್ಣಿಸು ವದು? ಕನ್ನಡ ಬಾಂಧವರಿಗೆ ಇದರ ಲಾಭವು ದೊರೆಯಬೇಕೆಂಬ ಆಶೆಯಿಂದ ಈ ಕೆಲಸವನ್ನು ಪೂರ್ಣಗೊಳಿಸಲು ಸಾಹಸ ಮಾಡಿರುವೆವು. ಉದಾರ ಹೃದ ಯರೂ ಮಾಲತೀಶನ ಸಾತ್ವಿಕಭಕ್ತರೂ ಆದ ನಮ್ಮ ಕನ್ನಡ ವಾಚಕರು ಹಂಸ ಕ್ಷೀರನ್ಯಾಯದಂತೆ ಇದರೊಳಗಿನ ಗುಣದೋಷಗಳನ್ನು ಪರಿಗ್ರಹಿಸಬೇಕಾಗಿ ಪ್ರಾರ್ಥನೆ.

ಮಿತಿ, ಪ್ರಥಮ ಏಕಾದಶಿ ವಿಭವ ಸಂವತ್ಸರ ಶಾ. ಶ. ೧೮೫೦ ಆಗಡಿ. } ಮಾಲತೀಶನ ಸೇವಕರ ಸೇವಕ, ಹೊಸೂರ.

॥ ಓಂ ನಮೋ ಭಗವತೇ ರಾಮ-ಕೃಷ್ಣಾಯ ॥

# ಶ್ರೀರಾಮಕೃಷ್ಣ
# ಸದ್‌ಬೋಧ-ಸುಧಾ!

## ( I )

### ಚರಿತ್ರ ಭಾಗ.

ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥
ಪರಿತ್ರಾಣಾಯ ಸಾಧೂನಾಮ್ ವಿನಾಶಾಯ ಚ ದುಷ್ಕೃತಾಮ್ ।
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

(ಭಗವದ್ಗೀತೆ ಅ. ೪ ಶ್ಲೋ. ೭-೮)

ಗೀತೆಯಲ್ಲಿ ಹೀಗೆಂದು ಅಂದು ತೋರಿಸಿದ ತನ್ನ ಮಾತನ್ನು ಸತ್ಯಮಾಡುವದಕ್ಕಾಗಿ ಭಗವಂತನಿಗೆ ಕಳೆದ ಶತಕದಲ್ಲಿ ಸದ್ಗುರು-ಶ್ರೀರಾಮಕೃಷ್ಣ-ಪರಮಹಂಸರ ರೂಪದಿಂದ ಸಗುಣಾವತಾರವನ್ನು ಕೈಕೊಳ್ಳದ ಹೊರತು ಗತ್ಯಂತರ ಉಳಿಯಲಿಲ್ಲ. ಯಾಕಂದರೆ, ಇದರಿಂದ ಕೇವಲ ಭಾರತೀಯರ ಉದ್ಧಾರವಷ್ಟೇ ಅಲ್ಲದೆ, ಸಾಮ್ರಾಜ್ಯಮದದಿಂದ ಅಂಧರಾಗಿ ಆಧ್ಯಾತ್ಮವಿಷಯದ ಕಲ್ಪನೆಯಿಲ್ಲದ ಪಾಶ್ಚಾತ್ಯರಾಷ್ಟ್ರಗಳಿಗೆ ಸಹ ಋಷಿಪ್ರಣೀತ ವಿಶ್ವಧರ್ಮದ ಜ್ಞಾನವುಂಟಾಗಬೇಕೆಂಬ ಸಂಕಲ್ಪವೂ ಇತ್ತು. ಆಗ ವಿಶ್ವಧರ್ಮದ ಉತ್ಪತ್ತಿಸ್ಥಾನವಾದ ಆರ್ಯಾವೃತ್ತವು ಅಜ್ಞಾನಾಂಧಕಾರದಿಂದ ಮುಸುಗಿ ಹೋಗಿತ್ತು. ಪಾಶ್ಚಾತ್ಯ ಸಂಸ್ಕೃತಿಯ ಮೋಹದಿಂದ ಎಲ್ಲ ದೇಶಗಳ ಜೊತೆಗೆ ನಮ್ಮ ದೇಶವು ಅಧೋಗತಿಗೆ ಇಳಿಯತೊಡಗಿತ್ತು. ವೇದಧರ್ಮದ ಆಜ್ಞೆಯನ್ನು ನಮ್ಮ ದೇಶವು ಮರೆಯತೊಡಗಿತ್ತು. ಸ್ವದೇಶ, ಸ್ವರಾಷ್ಟ್ರಗಳ ವಿಷಯಕ ಉಜ್ವಲಭಾವನೆಗಳು ಭಾರತೀಯರಲ್ಲಿ ಲಯವಾಗತೊಡಗಿದ್ದವು. ನಿವೃತ್ತಿಪರಶುಷ್ಕವೇದಾಂತವೂ ನಿಷ್ಕ್ರಿಯತೆಯೂ ಹೆಚ್ಚಾಗತೊಡಗಿದ್ದವು. ಒಟ್ಟಿಗೆ ಪರಮಾತ್ಮನ ಪ್ರಿಯ ಪುತ್ರಿಯಾದ ಭಾರತಮಾತೆಯು ದುಃಸಹವಾದ ವೇದನೆಯನ್ನು ಅನುಭವಿಸ ತೊಡಗಿದ್ದಳು. ಕಡೆಗೆ ಭಾರತಾಂಬೆಯ ಇದೆಲ್ಲ ದುಃಸ್ಥಿತಿಯನ್ನು ಕಂಡು ಭಗವಂತನ ಅಂತಃಕರಣವು ಕರಗಿ ನೀರಾಯಿತು. ಭಾರತೋದ್ಧಾರವು ಅವನಿಗೆ

ಅತ್ಯವಶ್ಯವೆಂದೆನಿಸಿತು; ಮೂಢಜನರ ಕ್ರಿಯಾಶೂನ್ಯತೆಯನ್ನು ಹೋಗಲಾಡಿಸುವದೂ ಪಾಶ್ಚಾತ್ಯರ ಕೃತಿಮ ಭೇದಾಭೇದವನ್ನು ಕಿತ್ತೊಗೆಯುವದೂ ಕರ್ತವ್ಯವೆಂದೆನಿಸಿತು! "ಅಖಿಲ ಮಾನವಜಾತಿಯು ಪರಮೇಶ್ವರನ ಪ್ರಜೆಗಳು! ಅರ್ಥಾತ್ ಸಮಾನಾಧಿಕಾರಿಗಳು" ಎಂಬ ಸಂದೇಶವು ಪ್ರಸಾರವಾಗುವ ಸಮಯವು ಪ್ರಾಪ್ತವಾಯಿತು; ಆಗ ಭಗವಂತನು ಸದ್ಗುರು ಶ್ರೀರಾಮಕೃಷ್ಣ ಪರಮಹಂಸರ ರೂಪದಿಂದ ಸಗುಣರೂಪವನ್ನು ಧರಿಸಿ ತನ್ನ ಅವತಾರ ಕಾರ್ಯವನ್ನು ಪೂರ್ಣಗೊಳಿಸಬೇಕಾಯಿತು.

ಶ್ರೀರಾಮಕೃಷ್ಣ ಪರಮಹಂಸರ ಹಿರಿಯರ ಹೆಸರು ಖುದಿರಾಮಬಾಬುಗಳು. ತಾಯಿಯ ಹೆಸರು ಚಂದ್ರಾಮಣಿದೇವಿಯೆಂದು; ಈ ಸುಶೀಲ ದಂಪತಿಗಳ ಉದರದಲ್ಲಿ ಪರಮಹಂಸರು ಇ. ಸ. ೧೮೩೬ರಲ್ಲಿ ಜನಿಸಿದರು. ಇವರ ಮೊದಲಿನ ಹೆಸರು ಗದಾಧರ ಅಥವಾ ಗದಾಯಿ ಎಂಬದಾಗಿತ್ತು. ಇವರ ಹಿರಿಯರಾದ ಖುದಿರಾಮಬಾಬುಗಳು ಕಲಕತ್ತೆಯ ಹತ್ತರ ಕಾಮಾರಪುಕುರ ಎಂಬ ಗ್ರಾಮದಲ್ಲಿ ವಾಸಿಸುತ್ತಿದ್ದರು. ಇವರು ಮನೆತನದಿಂದ ಬಹಳ ಬಡವರು. ಆದರೂ ಇವರು ಸ್ವಭಾವದಿಂದ ಸರಳರೂ, ಶಾಂತರೂ, ನಿಸ್ಪೃಹರೂ ಆಗಿದ್ದರು. ದೇವರ ಮೇಲೆ ಇವರ ಶ್ರದ್ಧೆ ಬಹಳ. ಇದರಿಂದ ಇವರು ಸತ್ಯಶೀಲ ಬ್ರಾಹ್ಮಣರೆಂದು ಸುತ್ತಲೆಲ್ಲ ಕೀರ್ತಿಯು ಹಬ್ಬಿತ್ತು. ಎಲ್ಲಜನರು ಇವರ ಸದ್ಗುಣಗಳಿಗೆ ಮೋಹಿತರಾಗಿ ಇವರನ್ನು ಕಂಡೊಡನೆ ನಿರತಿಶಯ ಭಕ್ತಿ-ಪ್ರೇಮಗಳನ್ನು ವ್ಯಕ್ತಗೊಳಿಸುತ್ತಿದ್ದರು. ಎಂಥ ಕಠಿಣ ಪ್ರಸಂಗವು ಒದಗಿದರೂ ಇವರು ತಮ್ಮ ಸತ್ಪಥದಿಂದ ಚ್ಯುತರಾಗುತ್ತಿದ್ದಿಲ್ಲ.

ಕಾಮಾರಪುಕುರಕ್ಕೆ ಬರುವ ಮೊದಲು ಖುದಿರಾಮ ಚಟ್ಟೋಪಾಧ್ಯಾಯರು ಅಲ್ಲಿಂದ ೩-೪ ಮೈಲುಗಳ ಮೇಲಿರುವ 'ದೇರೆ' ಎಂಬ ಗ್ರಾಮದಲ್ಲಿ ವಾಸಿಸುತ್ತಿದ್ದರು. ಈ ಗ್ರಾಮವು ಒಬ್ಬ ಜಮೀನದಾರನದು; ಇವನ ವ್ಯಾಜ್ಯವೊಂದು ಕಲಕತ್ತೆಯ ಕೋರ್ಟಿನಲ್ಲಿ ನಡೆದಿತ್ತು. ಅದರಲ್ಲಿ ಈ ಜಮೀನದಾರನ ಪಕ್ಷವು ಅಸತ್ಯವಿದ್ದು ವಿರುದ್ಧಪಕ್ಷವು ಪ್ರಾಮಾಣಿಕತನದ್ದಿತ್ತು. ಆದರೂ ಆ ಜಮೀನದಾರನು, ಶ್ರೀಮಂತ ಹಾಗು ಆ ಗ್ರಾಮದ ಅಧಿಪತಿಯಾಗಿದ್ದುದರಿಂದಲೂ, ವಿರುದ್ಧ ಪಕ್ಷದವರು ಬಡವರಿದ್ದುದರಿಂದಲೂ, ದುಡ್ಡಿನ ಬಲದಿಂದ ತಾನು ಜಯಶಾಲಿಯಾಗಬೇಕೆಂದು ಎಣಿಕೆ ಹಾಕುತ್ತಿದ್ದನು; ಹಾಗು ಇದಕ್ಕಾಗಿ ಖುದಿರಾಮನಂಥ ಪ್ರಸಿದ್ಧ ಪ್ರಾಮಾಣಿಕ ಬ್ರಾಹ್ಮಣನ ಸಾಕ್ಷಿಯಾಗುವಂತೆ ಏರ್ಪಾಡು

ಮಾಡಿಕೊಂಡರೆ ತನ್ನ ಪಕ್ಷಕ್ಕೆ ನಿಶ್ಚಯವಾಗಿಯೂ ಜಯಸಿಗುವದೆಂದು ಇವನು ಯೋಚಿಸಿ, ತನಗೋಸುಗ ಅಸತ್ಯಸಾಕ್ಷಿಯನ್ನು ನುಡಿಯಲು ಧನದಾಶೆಯನ್ನು ತೋರಿಸಿ, ಖುದಿರಾಮನನ್ನು ಸಮ್ಮತಿಸಲೆತ್ನಿಸತೊಡಗಿದನು.

ಆದರೆ ಖುದಿರಾಮನೆಂದರೆ ಸತ್ಯದ ಖಣಿಯು! ಪ್ರಾಮಾಣಿಕತನದ ಮೂ-ರ್ತಿಯು! ಬಡತನವು ಜನ್ಮದಾರಭ್ಯದಿಂದ ಬೇಕಾದಷ್ಟು ದುಃಖವನ್ನು ಕೊಡುತ್ತಿದ್ದರೂ ಕಿಂಚಿತ್ತಾದರೂ ಇವನ ಮನಶ್ಶಾಂತಿಯು ಭಂಗವಾಗಿದ್ದಿಲ್ಲ. ಆದುದರಿಂದ ಆ ಜಮೀನದಾರನು ತೋರಿಸಿದ ಧನದಾಶೆಯ ಆಟವು ಲೇಶವಾದರೂ ಇವನ ಮೇಲೆ ನಡೆಯಲಿಲ್ಲ. ಜಮೀನದಾರನು ತನ್ನಂತೆ ಸಾಕ್ಷಿಯನ್ನು ನುಡಿದರೆ ಬೇಕಾದಷ್ಟು ಧನವನ್ನು ಕೊಡುವೆನೆಂದರೂ ಖುದಿರಾಮನು ಅದನ್ನು ತೃಣಪ್ರಾಯವಾಗಿ ಎಣಿಸಿ ತಿರಸ್ಕರಿಸಿ ಬಿಟ್ಟನು. ಮುಂದೆ ಆ ಮದಾಂಧ ಜಮೀನದಾರನಿಂದ ತನ್ನ ಜೀವನ ಕ್ರಮಕ್ಕೆ ಬೇಕಾದಂಥ ಗಂಡಾಂತರಗಳು ಪ್ರಾಪ್ತವಾಗಹತ್ತಿದರೂ ಸತ್ಯದ ಮೇಲೆ ನಿಷ್ಠೆಯನ್ನಿಟ್ಟು ಶಾಂತತನದಿಂದ ಅವುಗಳನ್ನು ಅನುಭವಿಸಲಿಕ್ಕೆ ಸಿದ್ಧನಾದನು. ವಾಚಕರೇ, ಖುದಿರಾಮನ ಸತ್ಯನಿಷ್ಠೆಯನ್ನು ನೋಡಿದಿರಾ! ಇಂಥವರೇ ಮಹಾತ್ಮರು! ಇಂಥವರೇ ಪುಣ್ಯವಿಭೂತಿಗಳು! ಇಂಥವರೇ ಜಗತ್ಕಲ್ಯಾಣಕ್ಕೆ ಕಾರಣೀಭೂತರು!! ಇದಕ್ಕಾಗಿ ಇವರು ಪರಿಪರಿಯ ಕಷ್ಟಗಳನ್ನು ಅನುಭವಿಸಬೇಕಾಗುವದು.

ಕಟ್ಟಕಡೆಗೆ ಖುದಿರಾಮನು ತನ್ನ ಇಚ್ಛೆಯಂತೆ ನಡೆಯಲಿಲ್ಲವೆಂದು ತಿಳಿಯ ಬಂದೊಡನೆ ಆ ನೀಚ ಇನಾಮದಾರನು ಇವನನ್ನು ಗ್ರಾಮಾಂತರ ಮಾಡಲು ಕಾರಸ್ಥಾನ ನಡಿಸಿದನು. ಖುದಿರಾಮನು ಇದಕ್ಕೆ ಸಹ ಅಂಜದೆ ಜೀವಹೋದರೂ ಅಸತ್ಯವನ್ನು ನುಡಿಯಲಿಕ್ಕಿಲ್ಲವೆಂದು ದೃಢನಿಶ್ಚಯ ಮಾಡಿದನು; ಹಾಗು ಇನ್ನು ಈ ನೀಚ ಇನಾಮದಾರನ ಗ್ರಾಮದಲ್ಲಿರುವದಕ್ಕಿಂತಲೂ ಬೇರೊಂದು ನಿರುಪದ್ರವ ಸ್ಥಳಕ್ಕೆ ಹೋಗುವದು ಯುಕ್ತವೆಂದು ನಿರ್ಧರಿಸಿ, ತನ್ನ ಹೆಂಡರು-ಮಕ್ಕಳನ್ನು ಕರಕೊಂಡು ಹೊರಹೊರಟನು. ಇದರಿಂದ ಖುದಿರಾಮನ ಸತ್ಯನಿಷ್ಠೆಯು ಮತ್ತಿಷ್ಟು ಹೆಚ್ಚಾಗಿ ಸಮಾಜದಲ್ಲಿ ಅವನ ಕೀರ್ತಿಯು ಬೆಳೆಯಿತು.

ಖುದಿರಾಮನಂತೆ ಇವನ ಧರ್ಮಪತ್ನಿಯಾದ ಚಂದ್ರಾಮಣಿದೇವಿಯು ಸಹ ಸುಶೀಲಳೂ, ಸತ್ಯಪ್ರಿಯಳೂ ಆಗಿದ್ದಳು. ಬಡತನದ ಮೂಲಕ ಸಂಸಾರದಲ್ಲಿ ಬೇಕಾದಷ್ಟು ಕಷ್ಟವಾಗುತ್ತಿದ್ದರೂ ಇವಳೆಂದೂ ದುಃಖೋದ್ಗಾರಗಳನ್ನು ತೆಗೆಯುತ್ತಿದ್ದಿಲ್ಲ. ಯಾವಾಗಲೂ ಶಾಂತಚಿತ್ತದಿಂದ ತನ್ನ ಸಂಸಾರದಲ್ಲಿ ಮಗ್ನ

ಳಾಗಿ ಕೈಯಿಂದಾದಷ್ಟು ಪರೋಪಕಾರವನ್ನು ಮಾಡುವದರಲ್ಲಿಯೇ ತೊಡಗಿರುತ್ತಿದ್ದಳು. ಪರರ ದ್ರವ್ಯವನ್ನು ತೃಣಪ್ರಾಯವಾಗಿ ಎಣಿಸುವದು, ಪತಿಯಂತೆ ಇವಳಿಗೂ ಹುಟ್ಟುಗುಣವಾಗಿಹೋಗಿತ್ತು.

ಕಲಕತ್ತೆಯ ಹತ್ತರದಲ್ಲಿಯ ದಕ್ಷಿಣೇಶ್ವರ ದೇವಾಲಯವನ್ನು ಕಟ್ಟಿಸಿದ ರಾಣೀ-ರಾಸಮಣಿಯ ಅಳಿಯನಾದ ಮಥುರಬಾಬುವು ರಾಮಕೃಷ್ಣ ಪರಮಹಂಸರ ಪರಮ ಶಿಷ್ಯನು. ಇವನು ಒಮ್ಮೆ ಗುರುಗಳು ತನ್ನ ಕಡೆಯಿಂದ ಏನೂ ಸ್ವೀಕರಿಸುವದಿಲ್ಲವಾದ್ದರಿಂದ ಗುರುಮಾತೆಯ ಮುಖಾಂತರವಾಗಿಯಾದರೂ ಕೆಲವು ಹಣ ಮುಟ್ಟುವಂತೆ ಮಾಡಿ ಗುರುಗಳ ಸಂಸಾರಕ್ಕೆ ಅನುಕೂಲ ಮಾಡಿಕೊಡಬೇಕೆಂದು ಯೋಚಿಸಿದನು; ಹಾಗು ಒಂದು ದ್ರವ್ಯದ ಪೆಟ್ಟಿಗೆಯನ್ನು ಚಂದ್ರಾಮಣಿದೇವಿಯ ಸನ್ನಿಧಿಗೆ ಕಳುಹಿಸಿ ಅದನ್ನು ಸ್ವೀಕರಿಸಲು ಪ್ರಾರ್ಥಿಸಿದನು. ಆಗ ಗುರುಮಾತೆಯು ತಿಲಮಾತ್ರವಾದರೂ ಇವರ ಆಗ್ರಹಕ್ಕೆ ಅಥವಾ ಧನದಾಶೆಗೆ ಒಳಗಾಗದೆ ಅದರಲ್ಲಿಯ ಒಂದು ಕಾಸನ್ನು ಸಹ ಮುಟ್ಟಲಿಲ್ಲ. ಅಲ್ಲದೆ ಕಟ್ಟಕಡೆಗೆ—"ಮಥುರಬಾಬುಗಳೇ, ನಮಗೆ ಈ ನಿಮ್ಮ ದ್ರವ್ಯಸಹಾಯದಿಂದ ಏನಾಗಬೇಕಾಗಿದೆ? ನಿಮ್ಮ ಪುಣ್ಯಬಲದಿಂದ ನಿತ್ಯ ಗಂಗಾಸ್ನಾನವೂ, ಭಗವತೀ-ಕಾಲಿಕಾಮಾತೆಯ ದರ್ಶನವೂ, ಪ್ರಸಾದವೂ ಲಭಿಸುತ್ತದೆ. ಇದಕ್ಕಿಂತ ಹೆಚ್ಚಿನ ಲಾಭವಾವುದು? ಅಲ್ಲದೆ ಈ ಜಡದ್ರವ್ಯದಿಂದ ನನ್ನದು ಎಷ್ಟು ದುಃಖವು ಪರಿಹಾರವಾದೀತು? ಆದುದರಿಂದ ಬೇಡ; ಇದನ್ನು ತಿರುಗಿ ತಕ್ಕೊಂಡು ಹೋಗಿರಿ!" ಎಂದು ಶಾಂತಮನಸ್ಸಿನಿಂದ ನಿರ್ಧಾರವಾಗಿ ಹೇಳಿಬಿಟ್ಟಳು. ಮಥುರಬಾಬುವಿಗೂ ಉಳಿದ ಜನರಿಗೂ ಗುರುಮಾತೆಯ ಈ ನಿರ್ಲೋಭತನವನ್ನು ಕಂಡು ಆಶ್ಚರ್ಯವೆನಿಸಿತು. ನಿರುಪಾಯರಾಗಿ ತಿರುಗಿ ಬಿಟ್ಟರು.

ವಾಚಕರೇ, ಇಂಥ ಸುಶೀಲ ಹಾಗು ಸಾತ್ವಿಕ ದಂಪತಿಗಳ ಪವಿತ್ರ ಉದರದಲ್ಲಿಯೇ ರಾಮಕೃಷ್ಣ ಪರಮಹಂಸರಂಥ ಜಗದ್ವಿಖ್ಯಾತ ಪುಣ್ಯವಿಭೂತಿಗಳು ಜನಿಸಿದರು. ಇವರು ಖುದಿರಾಮನಿಗೆ ಎಲ್ಲಕ್ಕೂ ಚಿಕ್ಕಮಕ್ಕಳು. ಇವರು ಏಳು ವರ್ಷದವರಿರುವಾಗಲೇ ಇವರ ತಂದೆಯು ಪರಲೋಕವನ್ನೈದಿದರು. ಮೊದಲೇ ಬಡತನ; ಅದರಲ್ಲಿ ಪೋಷಕರ ನಿಧನ; ಇದರಿಂದ ಇವರ ಕೌಟುಂಬಿಕ ಸ್ಥಿತಿಯು ಹೇಳಲಾರದಷ್ಟು ಶೋಚನೀಯವಾಯಿತು. ರಾಮಕೃಷ್ಣರ ಹಿರಿಯ ಬಂಧುಗಳಾದ ರಾಮಕುಮಾರರೆಂಬವರು ಹಿರಿಯರ ನಿಧನದ ನಂತರ ತಮ್ಮ

ಸಂಸಾರದ ಎಲ್ಲ ಭಾರವನ್ನು ವಹಿಸಬೇಕಾಯಿತು; ಆದರೆ ಆಯುತಕ್ಕಿಂತ ಸಂಸಾರದ ವೆಚ್ಚವೇ ಹೆಚ್ಚಿದ್ದದರಿಂದ ಸಾಲದ ಭಾರವೂ ಇವರ ಮೈಮೇಲೆ ಬರದೆ ಇರಲಿಲ್ಲ. ಇದರಿಂದ ಇವರು ಬೇಸತ್ತು ಯಾವದೊಂದು ಉದ್ಯೋಗ ವನ್ನು ಹುಡುಕಬೇಕೆಂದು ಕಲಕತ್ತೆಗೆ ನಡೆದರು.

ಇವೆಲ್ಲ ಗೃಹಕೃತ್ಯಗಳ ತೊಂದರೆಗಳ ಮೂಲಕ ರಾಮಕೃಷ್ಣರ ವಿದ್ಯಾಭ್ಯಾಸವು ಶಾಲೆಯಲ್ಲಿ ಅಷ್ಟೊಂದು ಭರದಿಂದ ನಡೆಯಲಿಲ್ಲ. ಅದರಲ್ಲಿಯೂ ಇವರ ಮನಸ್ಸಿನ ಒಲವು ಶಾಲೆಯ ಅಭ್ಯಾಸಕ್ಕಿಂತಲೂ ದೇವಪೂಜೆ, ಭಗವಚ್ಚಿಂತನ, ಪುರಾಣ ಶ್ರವಣ, ಸಾಧುಸಂಗ ಮೊದಲಾದ ಆಧ್ಯಾತ್ಮಿಕ ವಿಷಯಗಳ ಕಡೆಗೇ ವಿಶೇಷವಾಗಿತ್ತು. ಕಾರಣ ಕೇವಲ ಓದು ಬರೆಯಲಿಕ್ಕಷ್ಟು ಹ್ಯಾಗೂ ಹೀಗೂ ಇವರು ತುಸು ವೇಳೆಯನ್ನು ಖರ್ಚುಮಾಡುತ್ತಿದ್ದರು. ಉಳಿದ ವೇಳೆಯನ್ನೆಲ್ಲ ಮಧುರ ಸ್ವರದಿಂದ ಭಗವನ್ನಾಮ ಗಾನಮಾಡುವದರಲ್ಲಿಯೇ ಖರ್ಚು ಮಾಡುತ್ತಿದ್ದರು. ಈಶ್ವರಭಕ್ತಿ ಧರ್ಮಶ್ರದ್ಧೆ ಮೊದಲಾದವುಗಳು ಚಿಕ್ಕಂದಿನಲ್ಲಿಯೇ ಇವರಲ್ಲಿ ಮನೆ ಮಾಡಿಕೊಂಡಿರಹತ್ತಿದವು.

ಕಲಕತ್ತೆಯಿಂದ ೩-೪ ಮೈಲುಗಳ ಮೇಲೆ ರಾಣೀ-ರಾಸಮಣಿಯೆಂಬ ಶ್ರೀಮಂತಳೋರ್ವಳು ಕಾಲೀಮಾತೆಯ ಒಂದು ದೊಡ್ಡ ದೇವಸ್ಥಾನವನ್ನು ಕಟ್ಟಿಸಿದ್ದಳು. ಈ ದೇವಸ್ಥಾನದ ಪೂಜಾ-ಕೆಲಸವನ್ನು ಬಹಳ ದಿವಸಗಳಿಂದ ಪರಮಹಂಸರ ಅಣ್ಣನೊಬ್ಬನು ನೋಡುತ್ತಿದ್ದನು. ಕಾಲಾಂತರದಿಂದ ಇವನು ಮರಣ ಹೊಂದಲು ಈ ಪೂಜಾಕೆಲಸವು ರಾಮಕೃಷ್ಣರ ಕಡೆಗೇ ಬಂದಿತು. ಇದರಿಂದ ಇವರ ಈಶ್ವರಾರಾಧನೆಗೆ ಮತ್ತಿಷ್ಟು ಕಳೆಯೇರಿತು. ಮೊದಲೇ ದೇವರಲ್ಲಿ ಅಚಲಶ್ರದ್ಧೆಯುಳ್ಳ ಇವರು ಅತ್ಯಂತ ಪ್ರೀತಿಯಿಂದಲೂ ಭಕ್ತಿ-ವಿಶ್ವಾಸದಿಂದಲೂ ಈ ಕೆಲಸವನ್ನು ಸಾಗಿಸಹತ್ತಿದರು.

ರಾಮಕೃಷ್ಣ ಪರಮಹಂಸರ ದೇವಪೂಜೆಯೆಂದರೆ ಬಹು ಅಲೌಕಿಕವಾಗಿತ್ತು. ದೇವಿಯೊಡನೆ ಇವರು ಬಹು ವಿಲಕ್ಷಣ ರೀತಿಯಿಂದ ವರ್ತಿಸುತ್ತಿದ್ದರು. ದೇವಸ್ಥಾನದಲ್ಲಿದ್ದ ಕಾಳಿಕಾದೇವಿಗೆ ಇವರು ಯಾವಾಗಲೂ "ಮಾತೇ, ತಾಯಿ," ಎಂದು ಸಂಬೋಧಿಸುತ್ತಿದ್ದರು; ಹಾಗು ಪ್ರೇಮಲ ಶಿಶುವು ತನ್ನ ತಾಯಿಯೊಡನೆ ವರ್ತಿಸುವಂತೆ ಇವರು ದೇವಿಯೊಡನೆ ವರ್ತಿಸುತ್ತಿದ್ದರು. ಇವರು ದೇವಿಯ ಸಮ್ಮುಖದಲ್ಲಿ ಕುಳಿತು ಆಗಾಗ್ಗೆ—"ಮಾತೋಶ್ರೀ, ನಿನ್ನ ಸುಮಂಗಲ ಸಗುಣರೂಪ ದರ್ಶನವಿಲ್ಲದೆ ಎಷ್ಟೋ ದಿನಗಳು ಗತಿಸಿದವಲ್ಲ! ನನ್ನ

ಮೇಲೆ ನಿನ್ನ ಅನುಗ್ರಹವು ಇನ್ನು ಎಂದಾಗಬೇಕು? ತಾಯಿ, ಈ ಭಕ್ತನ ಪರೀಕ್ಷೆಯನ್ನು ಮಾಡುವದು ಇನ್ನು ಸಾಕುಮಾಡು; ಕೃಪೆಮಾಡು; ದರ್ಶನವನ್ನು ಕೊಡು!'' ಎಂದು ದೈನ್ಯೋದ್ಗಾರಗಳನ್ನು ತೆಗೆಯುತ್ತಿದ್ದರು. ಹೊಟ್ಟೆಬಟ್ಟೆಯ ಅಥವಾ ಪ್ರಪಂಚದ ಯಾವದೊಂದು ಚಿಂತೆಯು ಇವರನ್ನು ಎಳ್ಳಷ್ಟು ಸಹ ಬಾಧಿಸುತ್ತಿದ್ದಿಲ್ಲ. ತಮ್ಮ ಇಚ್ಛೆಯಂತೆ ದೇವಿಯ ಸಗುಣರೂಪದರ್ಶನವಾಗದಿರುವದೇ ಇವರಿಗೆ ಬಲವಾದ ಚಿಂತೆ; ಇದಕ್ಕಾಗಿ ಇವರು ಖಿನ್ನ ಮನಸ್ಕರಾಗಿ ಕೆಲಕೆಲವು ಸಾರೆ ದೇವಿಯ ಪಾದಕಮಲಗಳ ಹತ್ತರ ಅಳುತ್ತ ಕೂಡ್ರುತ್ತಿದ್ದರು. ಈ ತರದ ಇವರ ವಿಲಕ್ಷಣ ಸ್ಥಿತಿಗತಿಯನ್ನು ಕಂಡು ಅನೇಕರು ಇವರಿಗೆ ಹುಚ್ಚು ಹಿಡಿದದೆ; ಮಿದುಳು ಕೆಟ್ಟಿದೆ; ಲಗ್ನಮಾಡಿದರೆ ಇವರ ಮಿದುಳು ಸುಧಾರಿಸುವದು; ಎಂದು ಇವರ ಆಪ್ತೇಷ್ಟರಿಗೆ ಸೂಚಿಸಹತ್ತಿದರು.

ವಾಚಕರೇ, ರಾಮಕೃಷ್ಣರ ಈ ಹುಚ್ಚು ವಿಷಯ ಸುಖದ ಹುಚ್ಚು ಆಗಿರದೆ ಈಶ್ವರಭಕ್ತಿಯ ಅತಿರೇಕದ ಅಥವಾ ಭಗವತ್ಸಾನ್ನಿಧ್ಯವನ್ನು ಪಡೆಯಬೇಕೆಂಬ ಉತ್ಕಟೇಚ್ಛೆಯ ಬಗ್ಗೆ ಎಂದು, ಹಗಲಿರಳು ವಿಷಯಸುಖದಲ್ಲಿ ಮುಳುಗಿ ಏಳುವ ಆ ಸಾಮಾನ್ಯಜನರಿಗೆ ಹೇಗೆ ಗೊತ್ತಾಗಬೇಕು? ತಮ್ಮ ತಮ್ಮ ದೋಷೈಕದೃಷ್ಟಿಗನುಸರಿಸಿ ಜನರು ಹೆಸರಿಡಹತ್ತಿದರು ರಾಮಕೃಷ್ಣರ ಆಪ್ತೇಷ್ಟರು ಸ್ವಗ್ರಾಮಕ್ಕೆ ಕರೆದೊಯ್ದು ಗೃಹಸ್ಥಾಶ್ರಮಿಗಳನ್ನಾಗಿ ಮಾಡಿದರೆ ಈ ಭ್ರಾಂತಿಯು ಬಯಲಾಗಬಹುದೆಂಬ ಭಾವನೆಯಿಂದ ಇವರಿಗೆ ಹೆಣ್ಣು ತೆಗೆದು ಲಗ್ನವನ್ನು ಮಾಡಿದರು; ಆದರೆ ಏನು ಮಾಡಿದರೂ ರಾಮಕೃಷ್ಣರ ಈಶ್ವರ ಪ್ರೇಮದ ಹುಚ್ಚು ಮತ್ತಷ್ಟು ಹೆಚ್ಚಾಯಿತೇ ಹೊರತು ಎಳ್ಳಷ್ಟಾದರೂ ಕಡಿಮೆಯಾಗಲಿಲ್ಲ.

ವಿವಾಹವಾದ ತುಸು ದಿವಸಗಳಲ್ಲಿಯೇ ಇವರು ಮತ್ತೆ ಕಲಕತ್ತೆಯ ಸಮೀಪದ ದಕ್ಷಿಣೇಶ್ವರೀ ದೇವಸ್ಥಾನಕ್ಕೆ ಹೊರಟು ಬಂದುಬಿಟ್ಟರು. ಇಲ್ಲಿ ಇವರು ತಮ್ಮ ಎಲ್ಲ ಆಯುಷ್ಯವನ್ನು ಕೇವಲ ತಪಶ್ಚರ್ಯದಲ್ಲಿಯೇ ಹಾಕಹತ್ತಿದರು. ಈ ಮೇರೆಗೆ ಇವರ ಹನ್ನೆರಡುವರ್ಷ ಆಯುಷ್ಯದ ದೀರ್ಘಕಾಲವು ಈ ತಪಸ್ಸಿನಲ್ಲಿ ಸಂದುಹೋಯಿತು. ಇದರಿಂದ ಕಾಮಕ್ರೋಧಾದಿ ಷಡ್ರಿಪುಗಳೆಲ್ಲ ಹೇಳಲು ಹೆಸರಿಲ್ಲದೆ ಪಲಾಯನ ಮಾಡಿದವು. ದೇಹಾಭಿಮಾನವು ಲಯವಾಗಿ ಬಿಟ್ಟಿತು. ಧನಕನಕಾದಿ ವಿಷಯಗಳು ತೃಣಸಮಾನವಾಗಿ ಬಿಟ್ಟವು. ಸ್ವಪ್ನದಲ್ಲಿ ಸಹ ಈಶ್ವರನ ಹೊರತು ಬೇರೆ ವಿಷಯಗಳ ಧ್ಯಾನವೇ ಇವರಿಗೆ ಇರಲಿಲ್ಲ. ಇದರಿಂದ ಇವರಿಗೆ ಸಮಾಧಿಯು ಹತ್ತಲಾರಂಭಿಸಿತು. ಮುಂದೆ ಈಶಸಾಕ್ಷಾತ್ಕಾರದ ದಿವ್ಯಾ

ನಂದದ ಅನುಭವವನ್ನು ಪಡೆಯುವದರಲ್ಲಿಯೇ ಎಲ್ಲ ವೇಳೆಯನ್ನು ಕಳೆಯ ಹತ್ತಿದರು.

ಈ ಸಮಯದಲ್ಲಿ ಸಾಧ್ವಿಯಾದ ಓರ್ವ ಮಹಾತಪಸ್ವಿನಿಯು ಈ ದಕ್ಷಿಣೇಶ್ವರ ದೇವಸ್ಥಾನಕ್ಕೆ ಆಗಮಿಸಿದಳು. ಇವಳ ಯೋಗಾಭ್ಯಾಸದ ಶಿಕ್ಷಣವೂ ಈಶ್ವರಪ್ರಾಪ್ತಿಯ ಅನುಭವವೂ ರಾಮಕೃಷ್ಣರಿಗೆ ಬಹಳ ಬಗೆಯಿಂದ ದೊರೆತವು. ಈ ಸಾಧ್ವಿಯ ತರುವಾಯ ತೋತಾಪುರಿಯೆಂಬ ಹೆಸರಿನ ಓರ್ವ ಮಹಂತರು ರಾಮಕೃಷ್ಣರಿಗೆ ಕೂಡಿದರು. ಇವರು ರಾಮಕೃಷ್ಣರ ಆಧ್ಯಾತ್ಮಿಕ ಉನ್ನತಿಯನ್ನೂ ಮುಕ್ತಸ್ಥಿತಿಯನ್ನೂ ಕಂಡು ಆನಂದಭರಿತರಾಗಿ ಇವರಿಗೆ ಸಂನ್ಯಾಸ ದೀಕ್ಷೆಯನ್ನು ಕೊಡಿಸಿದರು. ಇಂದಿನಿಂದಲೇ ಗದಾಧರನೆಂಬ ಮೂಲಹೆಸರಿನ ಈ ನಮ್ಮ ಚರಿತ್ರನಾಯಕರಿಗೆ ರಾಮಕೃಷ್ಣ ಪರಮಹಂಸರೆಂಬ ಅಭಿಧಾನವು ಪ್ರಾಪ್ತವಾಯಿತು; ಜಗದುದ್ಧಾರದ ಇವರ ಪ್ರತ್ಯಕ್ಷ ಕ್ರಿಯೆಗೆ ಆರಂಭವಾಯಿತು.

ಈ ಸಮಯದಲ್ಲಿ ರಾಮಕೃಷ್ಣ ಪರಮಹಂಸರ ಪ್ರಸಿದ್ಧಿಯು ಬಹುತರ ಎಲ್ಲ ಕಡೆಯಲ್ಲಿ ಆಯಿತು. ಇವರ ದರ್ಶನಲಾಭವನ್ನೂ ಬೋಧಾಮೃತವನ್ನೂ ಪಡೆಯಬೇಕೆಂದು ಅನೇಕ ಜನರು ಬರತೊಡಗಿದರು. ಇವರೆಲ್ಲರನ್ನು ಪರಮಹಂಸರು ತಮ್ಮ ಸ್ವಾನುಭವದ ಉಪದೇಶಾಮೃತದಿಂದ ತೃಪ್ತಿಬಡಿಸಿ ಸ್ವಾನಂದ ಸಾಮ್ರಾಜ್ಯದಲ್ಲಿ ಮುಳುಗಿಸುತ್ತಿದ್ದರು. ಇವರ ಪ್ರಾಸಾದಿಕವಾಣಿಯ ಬೋಧ ಶ್ರವಣಕ್ಕೆಂದು ಹೋದವರಲ್ಲಿ ಒಬ್ಬರೂ ಆನಂದಬಾಷ್ಪಗಳನ್ನು ಸುರಿಸದೆ ಹಿಂದಿರುಗುತ್ತಿದ್ದಿಲ್ಲ. ವ್ಯವಹಾರದೊಳಗಿನ ಮನೋರಂಜಕ ಉದಾಹರಣೆಯನ್ನು ಕೊಟ್ಟು ಆಧ್ಯಾತ್ಮಿಕ ತತ್ವಗಳನ್ನು ಉಪದೇಶಿಸುವವರಲ್ಲಿ ಪರಮಹಂಸರು ಅದ್ವಿತೀಯರಾಗಿದ್ದರು. ಎಲ್ಲ ಜಾತಿಯ, ಎಲ್ಲ ತರಗತಿಯ, ಎಲ್ಲ ಪಂಥದ ಜನರು ಇವರ ಶಿಷ್ಯತ್ವವನ್ನು ಸ್ವೀಕರಿಸಿದ್ದರು. ಇವರಲ್ಲಿ ಸ್ವಾಮೀ ವಿವೇಕಾನಂದರೆಂಬವರು ಪಟ್ಟಶಿಷ್ಯರಾಗಿದ್ದರು. ಗುರುಗಳು ಇವರಿಗೆ ಪೂರ್ಣ ಅನುಗ್ರಹವನ್ನು ಗೈದರು. ಕಡೆಗೆ ತಮ್ಮ ಅವತಾರ ಕಾರ್ಯದ ರಹಸ್ಯವನ್ನು ಇವರಿಗೆ ತಿಳಿಸಿ, ಜಗದುದ್ಧಾರದ ಆಜ್ಞೆಗೈದು ಇ. ಸ ೧೮೮೬ರಲ್ಲಿ ಶಾಶ್ವತ ಸಮಾಧಿಯನ್ನೈದಿದರು! ತಮ್ಮ ಪ್ರತ್ಯಕ್ಷ ಅವತಾರದ ಕಾರ್ಯವನ್ನು ಮುಗಿಸಿದರು!! ಪ್ರಾಣಜ್ಯೋತಿಯು ಚಿದ್ರೂಪದಲ್ಲಿ ಪುನಃ ಮೀಲನವಾಯಿತು!!

---

# ಶ್ರೀರಾಮಕೃಷ್ಣ ಸದ್ಬೋಧ-ಸುಧಾ!

## ಭಾಗ (II)

## ವಿಷಯ ಪ್ರವೇಶ.

ಶ್ರೀರಾಮಕೃಷ್ಣ ಪರಮಹಂಸರ ಆಧ್ಯಾತ್ಮಜ್ಞಾನವೆಂದರೆ ಸಮುದ್ರದಂತೆ ವಿಸ್ತಾರವೂ, ಅಗಾಧವೂ ಆದದ್ದು. ಕೇವಲ ಇವರ ಶಿಷ್ಯರೇ ಪರಮಾರ್ಥ ಜ್ಞಾನವೆಂಬ ಅರಣ್ಯದೊಳಗೆ ಸ್ವೈರ ಸಂಚಾರಮಾಡುವ ಶಾರ್ದೂಲಗಳಂತಿದ್ದರು. ಅಂದಬಳಿಕ ಗುರುಗಳ ಶಕ್ತಿಯನ್ನೇನು ವರ್ಣಿಸುವದು? ಇವರು ಷಡ್ರಿಪುಗಳನ್ನು ಸಂಪೂರ್ಣವಾಗಿ ಜಯಿಸಿ, ಈಶಸಾಕ್ಷಾತ್ಕಾರವನ್ನು ಹೊಂದಿದವರಾಗಿದ್ದುದರಿಂದ ಇವರ ಉಪದೇಶಾಮೃತ ಶ್ರವಣಕ್ಕೆ ಭಕ್ತರು ಹಗಲಿರುಳು ಧಾವಿಸುತ್ತಿದ್ದರು; ಹಾಗು ಪರಮಹಂಸರ ಕೇವಲ ಸಹವಾಸ ಮಾತ್ರದಿಂದ ದೊಡ್ಡ ತಪಸ್ಸು ಮಾಡಿದಂತಾಯಿತೆಂದೂ, ಪರಮಾರ್ಥಸಾಧನವಾಯಿತೆಂದೂ ಭಾವಿಸುತ್ತಿದ್ದರು. ಗುರುಗಳ ಅಮೃತವಚನಗಳಿಂದ ಸಂತುಷ್ಟರಾಗಿ ಧನ್ಯೋದ್ಗಾರಗಳನ್ನು ತೆಗೆಯುತ್ತಿದ್ದರು; ಹಾಗು ಗುರುಗಳ ಸದ್ಬೋಧಶ್ರವಣದಿಂದ ಭಗವತ್‌ಕೃಪೆಯನ್ನು ಸಂಪಾದಿಸಿ ಮುಕ್ತಸ್ಥಿತಿಯನ್ನು ಹೊಂದುತ್ತಿದ್ದರು. ಪರಮಹಂಸರ ಈ ಅಮೃತವಚನಗಳನ್ನು ಇವರ ಮುಖ್ಯ ಶಿಷ್ಯವರ್ಗದಲ್ಲಿ ಗಣನೆ ಹೊಂದಿದ್ದ ಬೇಲೂರ ರಾಮಕೃಷ್ಣ ಮಠದ ಅಧ್ಯಕ್ಷರಾಗಿದ್ದ ಬ್ರಹ್ಮೀಭೂತ ಬ್ರಹ್ಮಾನಂದ ಸ್ವಾಮಿಗಳವರು ಜಗತ್ಕಲ್ಯಾಣಕ್ಕಾಗಿ ಬಂಗಾಲೀ ಭಾಷೆಯಲ್ಲಿ ಪ್ರಕಟಿಸಿರುವರು. ಇದರ ಲಾಭವು ಪರಮಹಂಸರ ಆಧ್ಯಾತ್ಮಜ್ಞಾನದ ಲಾಭವನ್ನು ಪಡೆಯಬೇಕೆಂಬ ಆಕಾಂಕ್ಷೆಯುಳ್ಳ ನಮ್ಮ ಕನ್ನಡಿಗರಿಗೂ ಆಗಬೇಕೆಂಬ ಕುತೂಹಲದಿಂದ ಇಲ್ಲಿ ಕನ್ನಡಿಸುವೆವು. ಉದಾರ ಕನ್ನಡಿಗರು ಹಂಸಕ್ಷೀರನ್ಯಾಯದಂತೆ ಇದನ್ನು ಗ್ರಹಿಸಬೇಕಾಗಿ ಪ್ರಾರ್ಥನೆ.

---

—ರಾಮಕೃಷ್ಣ ಪರಮಹಂಸರ ಅಮೃತ ವಚನಗಳು:—

### ೧ ಈಶ್ವರ.

೧ ಬರ್ಫ ಹಾಗು ನೀರುಗಳು ಒಂದೇಯಾಗಿರುವಂತೆ ಈಶ್ವರನು ಸಾಕಾರನೂ ಇರುವನು; ನಿರಾಕಾರನೂ ಇರುವನು. ನೀರಿಗೆ ವಿಶೇಷವಾಗಿ ತಂಪುತಗಲಿ

ಬರ್ಫವಾಗುವದು; ಇದು ಸಾಕಾರ ಸ್ವರೂಪವು; ಇದೇ ಬರ್ಫಕ್ಕೆ ಶಕೆ ತಗಲಿ ನೀರುಂಟಾಗುವದು; ಇದು ನಿರಾಕಾರ ಸ್ವರೂಪವು. ಇದರಿಂದ ಈಶ್ವರನ ಸಾಕಾರ-ನಿರಾಕಾರಗಳ ಕಲ್ಪನೆಯನ್ನು ತಿಳಕೊಳ್ಳಬಹುದು.

೨ ಈಶ್ವರನು ಸಮಸ್ತ ಪ್ರಾಣಿಗಳ ಅಂತರಂಗದಲ್ಲಿಯೂ ಇರುವನು. ಶ್ರೀಮಂತ ಸ್ತ್ರೀಯರು ತೆರೆಯ ಮರೆಯಲ್ಲಿ ಕುಳಿತು, ತೆರೆಯ ಹೊರಗಿನ ಸಂಗತಿಗಳನ್ನು ನೋಡುವರು. ಅಂದರೆ ತೆರೆಯ ಮರೆಯಲ್ಲಿ ಕುಳಿತ ಆ ಸ್ತ್ರೀಯರಿಗೆ ಹೊರಗಿನ ಸಂಗತಿಗಳೂ ವಸ್ತುಗಳೂ ಬೇಕಾದ ಹಾಗೆ ಕಾಣುವವು; ಆದರೆ ತೆರೆಯ ಹೊರಗಿದ್ದವರಿಗೆ ಮಾತ್ರ ಒಳಗಿನವರಾರೂ ಕಾಣಲಾರರು. ಇದರಂತೆಯೇ ಸರ್ವಸ್ಥಾನದಲ್ಲಿಯ ಭಗವಂತನ ವಾಸ್ತವ್ಯವು!

೩ ಬ್ರಹ್ಮ ಹಾಗು ಶಕ್ತಿ ಇವುಗಳು ಅಭೇದವಾದವುಗಳು. ಈಶ್ವರನು ನಿಷ್ಕ್ರಿಯಾವಸ್ಥೆಯಲ್ಲಿರುವದೇ ಬ್ರಹ್ಮ ಸ್ವರೂಪವು! ಸೃಷ್ಟಿಯ ಸ್ಥಿತಿಲಯಾದಿ ಕ್ರಿಯೆಗಳಲ್ಲಿ ತೊಡಗಿರುವದೇ ಶಕ್ತಿ ಸ್ವರೂಪವು.

೪ ಬ್ರಹ್ಮ ಸ್ವರೂಪದಲ್ಲಿದ್ದ ಈಶ್ವರನು ಭಕ್ತರ ಸಲುವಾಗಿ ನಾನಾವತಾರಗಳಲ್ಲಿ ಸಗುಣರೂಪವನ್ನು ಧರಿಸಿ, ದರ್ಶನ ಕೊಡುವನು. ಸೂರ್ಯೋದಯವಾದನಂತರ ಬರ್ಫವು ಕರಗಿ ಹೇಗೆ ನೀರಾಗುವದೋ ಹಾಗೆ ಭಕ್ತರ ಹೃದಯವಲಯದಲ್ಲಿ ಜ್ಞಾನಭಾಸ್ಕರನ ಉದಯವಾಯಿತೆಂದರೆ ಆಗ ಅವನಿಗೆ ಈಶ್ವರನು ಸಾಕಾರನಾಗಿದ್ದರೂ ನಿರಾಕಾರನಾಗಿ ಕಾಣುವನು.

೫ ಮೃತ್ಯುಮುಖರಾಗಿ ರಾಜರ್ಷಿಭೀಷ್ಮಾಚಾರ್ಯರು ಶರಪಂಜರದ ಮೇಲೆ ಮಲಗಿದ್ದರೂ ಕಣ್ಣೀರು ಸುರಿಸುತ್ತಿರುವದನ್ನು ಕಂಡು, ಅರ್ಜುನನು ಶ್ರೀಕೃಷ್ಣನನ್ನು ಕುರಿತು—"ಕೃಷ್ಣಾ ಇದೇನಾಶ್ಚರ್ಯವು! ಸತ್ಯವಾದಿಯೂ, ಜಿತೇಂದ್ರಿಯನೂ, ಜ್ಞಾನಶ್ರೇಷ್ಠನೂ, ಅಷ್ಟವಸುಗಳಲ್ಲೋರ್ವನೂ ಆದ ಪಿತಾಮಹನಾದ ರಾಜರ್ಷಿಭೀಷ್ಮನು ದೇಹತ್ಯಾಗದ ಈ ಅಂತ್ಯಕಾಲದಲ್ಲಿ ಸಹ ಮಾಯೆಗೆ ಶಿಲ್ಕಿ ಅಶ್ರುಗಳನ್ನು ಸುರಿಸುತ್ತಿರುವನಲ್ಲ!" ಎಂದು ಪ್ರಶ್ನೆಮಾಡಿದನು. ಆಗ ಶ್ರೀಕೃಷ್ಣಪರಮಾತ್ಮನು ಅರ್ಜುನನ ಈ ಚಿಕಿತ್ಸಕ ಪ್ರಶ್ನೆಯನ್ನು ಭೀಷ್ಮನ ಮುಂದೆ ಇಡಲು, ಅವನು ಮತ್ತಿಷ್ಟು ಶೋಕಾಕುಲನಾಗಿ—"ಅಂತರ್ಯಾಮಿಯಾದ ಶ್ರೀಕೃಷ್ಣನೇ, ನಾನು ಮಾಯೆಯಿಂದ ಗ್ರಸ್ತನಾಗಿ ಈ ಅಶ್ರುಗಳನ್ನು ಸುರಿಸುತ್ತಿರುವದಿಲ್ಲ; ಈ ಸಂಗತಿಯನ್ನು ಸರ್ವಸಾಕ್ಷಿಯಾದ ನಿನಗೆ ಹೇಳಲಿಕ್ಕೆ ಬೇಡ; ಆದರೆ ನನಗೆ ದುಃಖವೆನಿಸುವದಿಷ್ಟಕ್ಕೇ! ನಿನ್ನ ಲೀಲೆಯು ಇಷ್ಟು ದೀರ್ಘ

ಕಾಲವಾದರೂ ತಿಳಿಯಲೊಲ್ಲದೆಂದು; ಯಾರ ನಾಮಸ್ಮರಣಮಾತ್ರದಿಂದ ಜನರು ಭವಸಾಗರದಿಂದ ಮುಕ್ತರಾಗುವರೋ ಆ ಪರಮಪುರುಷನಾದ ನೀನು ಪ್ರತ್ಯಕ್ಷ ಪಾಂಡವರ ಸೇವಕನಾಗಿಯೂ, ಸಾರಥಿಯಾಗಿಯೂ ಇರುತ್ತಿರಲು, ಅವರ ವಿಪತ್ತು ಇನ್ನೂ ಪರಿಹಾರವಾಗಲಿಕ್ಕೆ ವಿಲಂಬವೇ! ಅಂದಮೇಲೆ ಪಾಮರ ರಾದ ಉಳಿದ ಜನರಿಗೆ ನಿನ್ನ ಲೀಲೆಯು ತಿಳಿಯಬೇಕೆಂತು? ಜಗಚ್ಚಾಲಕಾ, ಸಾಕಾರನೂ, ನಿರಾಕಾರನೂ ಆದ ನಿನ್ನ ಮಹಿಮೆಯು ಯೋಗಿಗಳಿಗೆ ಸಹ ತಿಳಿಯಲು ದುರ್ಗಮವಾದುದು!''

೬ ಒಮ್ಮೆ ಶ್ರೀ ರಾಮಕೃಷ್ಣಪರಮಹಂಸರ ಸನ್ನಿಧಿಯಲ್ಲಿ ಈಶ್ವರನ ವಿಷಯವಾಗಿ ಮಾತುಕಥೆಗಳು ನಡೆದಿರಲು, ಇವರ ಪರಮ ಶಿಷ್ಯರಾದ ಮಥುರ ಬಾಬುಗಳೆಂಬವರು ಗುರುಗಳನ್ನು ಕುರಿತು--''ಮಹಾರಾಜ, ಸೃಷ್ಟಿಯ ನಿಯಮಗಳ ಸಂಬಂಧವು ಭಗವಂತನಿಗೂ ಇರುವದೆಂದ ಮೇಲೆ ಈ ನಿಯಮಗಳ ಶೃಂಖಲೆಗೆ ಶಿಲ್ಕಿದ ಅವನು ಕೇವಲ ಇಚ್ಛಾಮಾತ್ರದಿಂವ ಬೇಕಾದದ್ದನ್ನು ಮಾಡುವನೆಂಬ ಮಾತು ಹೇಗೆ ಸತ್ಯವು?'' ಎಂದು ಪ್ರಶ್ನೆ ಮಾಡಿದರು. ಅದಕ್ಕೆ ಗುರುಗಳು:—''ಅಹುದು; ಇಚ್ಛಾಮಾತ್ರದಿಂದ ಈಶ್ವರನಿಗೆ ಬೇಕಾದದ್ದನ್ನು ಸೃಜಿಸಲು ಶಕ್ಯವಿದೆ'' ಎಂದು ಉತ್ತರ ಕೊಟ್ಟರು.

ಮಥುರಬಾಬುವು—ಹಾಗಾದರೆ ಅವನ ಇಚ್ಛಾಮಾತ್ರದಿಂದ ಈ ಕೆಂಪು ದಾಸಾಳದ ಗಿಡಕ್ಕೆ ಬಿಳಿಯ ಹೂವುಗಳಾಗಬಹುದೋ!

ಗುರುಗಳು:—ಓಹೋ ಇದರಲ್ಲೇನು ಸಂಶಯವು; ಅವನ ಇಚ್ಛೆಗೆ ಬಂದರೆ ಈ ಸಂಗತಿಯೇನು ಅಶಕ್ಯವಲ್ಲ!

ಎಂದು ನುಡಿದ ಗುರುಗಳ ಮಾತನ್ನು ಕೇಳಿ ಮಥುರಬಾಬುವಿಗೆ ವಿಚಿತ್ರವೆನಿಸಿತು; ಆದರೆ ಇದು ಅಶಕ್ಯವಾದುದೆಂದು ಈ ಮಾತಿನ ಮೇಲೆ ವಿಶ್ವಾಸವು ಮಾತ್ರ ಕೂಡ್ರಲಿಲ್ಲ. ಆದರೂ ಅವನು ದೊಡ್ಡವರ ಸಂಗಡ ವಿಶೇಷ ಮಾತುಗಳನ್ನು ಬೆಳೆಸುವದು ಯೋಗ್ಯವಲ್ಲೆಂದು ಬಗೆದು ''ಇದು ತೀರ ಅಶಕ್ಯವೆಂದಿಷ್ಟೇ'' ತನ್ನ ಸ್ವಪ್ಪಾಭಿಪ್ರಾಯವನ್ನು ಪ್ರಕಟಿಸಿ ತತ್ಪ್ರಸಂಗವನ್ನು ಮುಗಿಸಿಬಿಟ್ಟನು.

ಆದರೆ ಆಶ್ಚರ್ಯದ ಸಂಗತಿಯೆಂದರೆ,-ಮುಂದೆ ತುಸು ದಿವಸಗಳಲ್ಲಿ ಅದೇ ದಕ್ಷಿಣೇಶ್ವರ ದೇವಸ್ಥಾನದ ಉಪವನದೊಳಗಿನ ಒಂದು ದಾಸಾಳದ ಗಿಡದ ಟೊಂಗೆಯಲ್ಲಿ ಕೆಂಪು ಹಾಗು ಬಿಳೇ ದಾಸಾಳದ ಹೂವುಗಳು ಬಿಟ್ಟಿದ್ದವು. ಆಗ ಗುರುಗಳು ಮುಗುಳು ನಗೆ ನಗುತ್ತ ಹೂಗಳಿಂದೊಡಗೂಡಿದ ಆ ಟೊಂಗೆಯನ್ನು

ಕೊಯಿದು ತಂದು ಮಥುರಬಾಬುವಿಗೆ ತೋರಿಸಿದರು. ಬಾಬುಗಳು ಗುರುಗಳ ಅಗಾಧ ಮಹಿಮೆಯನ್ನು ಕಂಡು ಕೌತುಕಬಟ್ಟರು; ಹಾಗು ತಮ್ಮ ಅಜ್ಞಾನದ ಮಾತಿಗಾಗಿಯೂ ಮೂಢತನಕ್ಕಾಗಿಯೂ ಕ್ಷಮೆಬೇಡಿದರು.

———

## ೨ ಮಾಯೆ.

೧ ಮಾಯೆಯಿದು ನೀರಿನ ಪೃಷ್ಠಭಾಗದಂತಿರುವದು. ಹೇಗೆ ನಮ್ಮ ಕೈಗಳಿಂದ ಹಿಂಗಡಿಸಿದ ಅದರ ಪೃಷ್ಠಭಾಗವು ಮತ್ತೊಂದು ಕ್ಷಣದಲ್ಲಿ ಬಂದು ಕೂಡುವದೋ ಹಾಗೆ ಮನುಷ್ಯನ ವಿಚಾರವು ಎಲ್ಲಿಯವರೆಗೆ ವಿವೇಕ ಸ್ಥಿತಿಯಲ್ಲಿರುವದೋ, ಎಲ್ಲಿಯವರೆಗೆ ಸತ್ಸಹವಾಸವಿರುವದೋ ಅಲ್ಲಿಯವರೆಗೆ ಅವನ ಮನಸ್ಸು ನಿರ್ಮಲವಾಗಿಯೂ, ಮಾಯೆಯಿಂದ ನಿರ್ಲಿಪ್ತವಾಗಿಯೂ ಇರುವದು; ಆದರೆ ಮತ್ತೊಂದು ಕ್ಷಣದಲ್ಲಿ ವಿಷಯವಾಸನೆಯು ಪ್ರವೇಶವಾದರೆ ಸಾಕು; ಮತ್ತೆ ಮನಸ್ಸು ಮಾಯೆಯೊಳಗೆ ಸಿಕ್ಕಿ ತೊಳಲಾಡಹತ್ತುವದು.

೨ ಸರ್ಪದ ಬಾಯಿಯಲ್ಲಿ ವಿಷವಿರುತ್ತಿದ್ದರೂ ಅದಕ್ಕೆ ಆ ವಿಷದ ಬಾಧೆಯು ಆಗದು; ಹಾಗು ತನ್ನ ಅಂಗಾಂಗಗಳನ್ನು ಅದು ಬೇಕಾದಷ್ಟು ಸಾರೆ ಕಚ್ಚಿಕೊಂಡರೂ ವಿಷವು ಎಂದೂ ಏರದು; ಆದರೆ ಬೇರೆಯವರಿಗೆ ಕಚ್ಚಿದರೆ ಮಾತ್ರ ಈ ವಿಷವು ಬಾಧಿಸದೆ ಇರದು. ಇದರಂತೆಯೇ ಭಗವಂತನ ಸ್ಥಳದಲ್ಲಿ ಮಾಯೆಯ ವಾಸ್ತವ್ಯವು. ಇದು ಅವನಲ್ಲಿ ಇರುತ್ತಿದ್ದರೂ ಅವನಿಗೆ ಬಾಧಿಸದು. ಯಾಕಂದರೆ ಅವನು ಮಾಯಾತೀತನು. ಇವನು ತನ್ನ ಈ ಮಾಯೆಯ ಪರಿಣಾಮವನ್ನು ಬೇರೆಯವರ ಮೇಲೆ ಮಾಡಲು ಪೂರ್ಣ ಸಮರ್ಥನಿರುವನು.

೩ ಜೀವಾತ್ಮವು ಈ ಮಾಯೆಯ ಅಡ್ಡಿಯಿಂದಲೇ ಪರಮಾತ್ಮನಲ್ಲಿ ಗುರುತಿಸಲು ತೊಳಲಾಡುತ್ತದೆ. ಈ ಮಾಯೆಯ ಪಡದೆಯನ್ನು ತೆಗೆಯದ ಹೊರತು ಅವನ ಸಾಕ್ಷಾತ್ಕಾರವಾಗಲಾರದು.

೪ ಮಾಯೆಯಲ್ಲಿ ಎರಡು ಪ್ರಕಾರಗಳು; ಒಂದನೇದು ವಿದ್ಯಾಮಾಯೆ; ಎರಡನೇದು ಅವಿದ್ಯಾಮಾಯೆ; ವಿದ್ಯಾಮಾಯೆಯಲ್ಲಿ ವಿವೇಕ-ವೈರಾಗ್ಯಗಳೆಂದು ಮತ್ತೆ ಎರಡು ಪ್ರಕಾರಗಳು. ಈ ವಿದ್ಯಾಮಾಯೆಯ ಆಶ್ರಯವನ್ನು ಹೊಂದಿಯೇ ಜೀವಾತ್ಮವು ಪರಮಾತ್ಮನಿಗೆ ಶರಣಾಗತವಾಗುವದು. ಅವಿದ್ಯಾಮಾಯೆಯಲ್ಲಿ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂದು ಆರು ಪ್ರಕಾರಗಳು. ಮಾಯೆಯು ಇವುಗಳ ದ್ವಾರದಿಂದ ಮನುಷ್ಯನನ್ನು ಅಜ್ಞಾನ

ಪಾಶದಿಂದ ಬಿಗಿದು ಸಂಸಾರಸಾಗರದಲ್ಲಿ ಒಗೆಯುತ್ತದೆ; ಆದರೆ ವಿದ್ಯಾ ಮಾಯೆಯು ಉದಯವಾದ ಮಾತ್ರದಿಂದ ಈ ಅವಿದ್ಯಾಮಾಯೆಯ ಬಂಧನವ ಕಡಿದು ಹೋಗುವದು.

---

## ೩ ಜೀವಗಳ ಅವಸ್ಥಾ ಭೇದ.

೧ ವಿಷಯಲೋಲುಪ ಜೀವಿಗಳ ಮನಸ್ಸೆಂದರೆ, ಶೆಗಣಿಯೊಳಗಿನ ಹುಳ ಗಳಂತೆ ಎಂದು ಹೇಳಬಹುದು. ಈ ಶೆಗಣಿಯೊಳಗಿನ ಹುಳಗಳು ಶೆಗಣಿಯಲ್ಲಿ ಮಾತ್ರ ಬದುಕಿರುವವೇ ಹೊರತು ಬೇರೆ ಉತ್ತಮ ಸ್ಥಳಗಳಿಗೆ ಒಯ್ದರೆ ಅಥವಾ ಕಮಲಪತ್ರದಲ್ಲಿ ಒಯ್ದು ಹಾಕಿದರೆ ಅವು ಮರಣಕ್ಕೆ ಈಡಾಗುವವು. ಇದರಂತೆ ವಿಷಯಾಸಕ್ತ ಜನರ ಸ್ಥಿತಿಗತಿಯು. ಇವರಿಗೆ ವಿಷಯಸುಖದ ಹೊರತು ಬೇರೆ ಯಾವದೂ ಸೇರದು. ಇವರ ಮನಸ್ಸನ್ನು ಆಧ್ಯಾತ್ಮವಿಷಯದ ಕಡೆಗೆ ಒಯ್ಯ ಲೆತ್ನಿಸಿದರೆ ಎಷ್ಟು ಮಾತ್ರಕ್ಕೂ ಅದು ಸರಿಬರದು.

೨ ಸೂರ್ಯಕಿರಣಗಳು ಎಲ್ಲೆಡೆಯಲ್ಲಿ ಸರಿಯಾಗಿ ಬೀಳುತ್ತಿದ್ದರೂ ನೀರು ಕನ್ನಡಿ ಮೊದಲಾದ ಸ್ವಚ್ಛ ಮೇಲ್ಮೆಯುಳ್ಳ ಪದಾರ್ಥಗಳ ಮೇಲೆ ಹೆಚ್ಚಾಗಿ ಪ್ರಕಾಶಿಸುತ್ತವೆ. ಅಂತರ್ಯಾಮಿಯಾದ ಭಗವಂತನ ವಾಸ್ತವ್ಯವು ಸರ್ವ ಪ್ರಾಣಿ ಗಳಲ್ಲಿ ಸರಿಯಾಗಿರುತ್ತಿದ್ದರೂ ಸಾಧುಸಂತರ ಹೃದಯದಲ್ಲಿ ಮಾತ್ರ ಹೆಚ್ಚು ಪ್ರತಿ ಬಿಂಬಿಸುವನು.

---

## ೪ ಸಾಧಕಾವಸ್ಥೆ.

೧ ಸಾಧಕನು ಶಾಸ್ತ್ರವಿಚಾರವನ್ನು ಸಚ್ಚಿದಾನಂದನ ಸಾಕ್ಷಾತ್ಕಾರವಾಗು ವವರೆಗೆ ಮಾಡತಕ್ಕದ್ದು. ಅನಂತರದಲ್ಲಿ ಇದು ಅನವಶ್ಯಕವು. ಭ್ರಮರದ "ಗುಂಯಿ" "ಗುಂಯಿ"ರವವು, ಎಲ್ಲಿಯವರೆಗೆ ಅದು ಮಕರಂದ ಸೇವನೆ ಪ್ರಾರಂಭಿಸಿರುವದಿಲ್ಲವೋ ಅಲ್ಲಿಯ ವರೆಗೆ; ಆದರೆ ಪುಷ್ಪಗಳ ಮೇಲೆ ಕುಳಿತು ಮಧುಪಾನಕ್ಕೆ ಅದು ಪ್ರಾರಂಭಿಸಿದೊಡನೆ ಸ್ತಬ್ಧವಾಗುವದು.

೨ ಕೊಡವು ತುಂಬುವವರೆಗೆ ಮಾತ್ರ 'ಬುಡು' 'ಬುಡು' ಎಂಬ ಧ್ವನಿಯು ಹೊರಡುವದು; ಆದರೆ ಅದು ಪೂರ್ಣತುಂಬಿದ ಮೇಲೆ ಈ ಸಪ್ಪಳವು ನಿಲ್ಲುವದು. ಇದರಂತೆ ಭಗವಂತನ ಸಾನ್ನಿಧ್ಯವಾಗುವವರೆಗೆ ಮನುಷ್ಯನು ಅವನ ವಿಷಯವಾಗಿ ನಾನಾತರದ ತರ್ಕ-ವಿತರ್ಕಗಳನ್ನು ನಡಿಸುವನು. ಆದರೆ

ಅವನ ದರ್ಶನಲಾಭವಾದೊಡನೆ ಮಾತ್ರ ಸ್ಥಿರಚಿತ್ತನಾಗಿ ಸ್ವಾನಂದಸುಖವನ್ನು ಅನುಭವಿಸಹತ್ತುವನು.

೩ ವಿವೇಕ ವೈರಾಗ್ಯಗಳಿಲ್ಲದ ಶಾಸ್ತ್ರಾವಲೋಕನವು ವ್ಯರ್ಥವು. ಇವುಗಳಿಲ್ಲದೆ ಎಳ್ಳಷ್ಟು ಸಹ ಧರ್ಮಸಾಧನೆಯು ಆಗಲಾರದು. ಸತ್ಯಾಸತ್ಯತೆಗಳ ತಿಳುವಳಿಕೆಗೂ ಸದ್ವಸ್ತುವನ್ನು ಆಶ್ರಯಿಸುವದಕ್ಕೂ ವಿವೇಕವೆನ್ನುವರು. ವೈಷಯಿಕ ಸುಖದಲ್ಲಿ ಅನಾಸಕ್ತನಾಗಿರುವದಕ್ಕೇ ವೈರಾಗ್ಯವೆಂದು ಅನ್ನುವರು.

---



## ೫ ಸಂಸಾರ ಹಾಗು ಸಾಧನ.

೧ ಸಂಸಾರದಲ್ಲಿರುತ್ತಿದ್ದರೂ, ಯಾವನು ತನ್ನ ಶಾಶ್ವತ ಸುಖವನ್ನು ಸಾಧಿಸಿಕೊಳ್ಳುವನೋ ಅವನೇ ಖರೇ ಸಾಧಕನು! ಅವನೇ ಖರೇ ವೀರನು! ತಲೆಯ ಮೇಲೆ ಬೇಕಾದಷ್ಟು ಭಾರವಿರುತ್ತಿದ್ದರೂ ನಿಜವಾದ ವೀರಪುರುಷನು ಹೇಗೆ ರಣಾಂಗಣದಲ್ಲಿ ಎಲ್ಲ ಕಡೆಗೆ ಲಕ್ಷ್ಯವನ್ನು ಪೂರೈಸುತ್ತ ಹೋರಾಡುವನೋ ಹಾಗೆ ಸಾಧಕವೀರನು ಸಂಸಾರದ ಭಾರವು ತಲೆಯ ಮೇಲೆ ಬೇಕಾದಷ್ಟು ಇರುತ್ತಿದ್ದರೂ, ಭಗವಚ್ಚರಣದಲ್ಲಿ ಲಕ್ಷ್ಯವನ್ನು ಪೂರೈಸಲು ಎಂದೂ ಮರೆಯನು.

೨ ಮನೆಯಿಂದ ದೂರವಿರುತ್ತಿರುವ ಜಲಾಶಯದಿಂದ ದೇವತಾರ್ಚನಾದಿ ಕೆಲಸಗಳಿಗೆ ನೀರು ತರಬೇಕಾದರೆ ಹೆಣ್ಣುಮಕ್ಕಳು ಕಳಸೋಪಾದಿಯಲ್ಲಿ ತಲೆಯ ಮೇಲೆ ಕೊಡ, ದೊಡ್ಡತಂಬಿಗೆ, ತಂಬಿಗೆ, ದೊಡ್ಡಗಿಂಡಿ, ಸಣ್ಣಗಿಂಡಿ ಹೀಗೆ ನಾಲ್ಕೈದು ತುಂಬಿದ ಪಾತ್ರೆಗಳನ್ನು ಇಟ್ಟುಕೊಂಡು ಬರುವರು. ಹಾಗು ಬಗಲಲ್ಲಿ ಒಂದು ಕೊಡವನ್ನು ಹೊರುವರು. ಸಂಗಡಿದ್ದ ಹೆಣ್ಣುಮಕ್ಕಳೊಡನೆ ಆ ಸುದ್ದಿ ಈ ಸುದ್ದಿ ಮಾತನಾಡುತ್ತ ಬರುವರು. ಆದರೂ ತಲೆಯ ಮೇಲೆ ಕಳಸೋಪಾದಿಯಲ್ಲಿದ್ದ ತುಂಬಿದ ಪಾತ್ರೆಗಳ ಕಡೆಗೆ ಅವರ ಲಕ್ಷ್ಯವು ಸಂಪೂರ್ಣವಾಗಿ ಇದ್ದೇ ಇರುತ್ತದೆ. ಇದೇಮೇರೆಗೆ ಸಂಸಾರದಲ್ಲಿದ್ದ ಮನುಷ್ಯನು ಸಂಸಾರ ಭಾರವನ್ನು ಬೇಕಾದಷ್ಟು ವಹಿಸಿದ್ದರೂ ಭಗವಚ್ಚರಣದಲ್ಲಿ ತನ್ನ ಸ್ಥಿರಚಿತ್ತವಿರಿಸಲು ಎಚ್ಚರ ಪಡತಕ್ಕದ್ದು.

೩ ಕೆಸರಿನಲ್ಲುದಯಿಸಿದ ಕಮಲವು ಕೆಸರಿನಲ್ಲಿಯೇ ಇರುತ್ತಿದ್ದರೂ ಹೇಗೆ ಕಶ್ಮಲದಿಂದ ರಹಿತವಾಗಿರುವದೋ ಹಾಗೆ ಸಾಂಸಾರಿಕನು ಸಂಸಾರದಲ್ಲಿರತಕ್ಕದ್ದು.

೪ ನಾವಾಡಿಗನು ತನ್ನ ನಾವಿನ ಕೆಲಭಾಗವನ್ನು ನೀರಲ್ಲಿ ಮುಳುಗಿಸಿ ನಾವು ನಡಿಸಿದರೂ ಹೇಗೆ ನೀರು ಒಳಗೆ ಬರಗೊಡನೋ ಹಾಗೆ ಸಾಧಕ ಮನುಷ್ಯನು ಸಂಸಾರದಲ್ಲಿರುತ್ತಿದ್ದರೂ ಸಂಸಾರ ಸಾಗರವನ್ನು ದಾಟಬೇಕಾಗಿರುವದರಿಂದ ಮನಸ್ಸಿನಲ್ಲಿ ಸಂಸಾರ ಭಾವನೆಯು ಪ್ರವೇಶಿಸದಂತೆ ದಕ್ಷನಾಗಿರ ತಕ್ಕದ್ದು.

೫ ಹಲಸಿನ ಹಣ್ಣಿನೊಳಗಿನ ತೊಳೆಗಳನ್ನು ತೆಗೆಯುವವನು ಕೈಗೆ ಒಳ್ಳೆಣ್ಣೆಯನ್ನು ಸವರಿಕೊಂಡು ಹಣ್ಣು ಉಚ್ಚುವನು. ಇದರಿಂದ ಅವನ ಕೈಗೆ ಹಣ್ಣಿನೊಳಗಿನ ಜಿಗಟು ಅಥವಾ ಹೊಲಸು ತಗಲುವದಿಲ್ಲ. ಇದರಂತೆ ಜ್ಞಾನ ರೂಪ ತೈಲವನ್ನು ಸವರಿಕೊಂಡು ಸಂಸಾರದಲ್ಲಿ ಕೈಹಾಕಿದರೆ ಕನಕಕಾಮಿನಿ ಮೊದಲಾದ ವೈಷಯಿಕ ಸುಖದ ಹೊಲಸು ತಗಲದು.

---

## ೬ ಸಾಧನಾಧಿಕಾರಿ.

(೧) ಬಾಲ್ಯದಲ್ಲಿ ಹುಡುಗರ ಮನಸ್ಸು ನಿರ್ಲಿಪ್ತವಾಗಿರುತ್ತದೆ. ಹಾಗು ಪೂರ್ಣವಾಗಿ ಅದು ಅವರ ಸ್ವಾತಂತ್ರ್ಯಕ್ಕೊಳಪಡಲು ಸುಲಭಸಾಧ್ಯವಿರುತ್ತದೆ; ಆದರೆ ಮುಂದೆ ದಿನಗಳು ಗತಿಸಿದ ಹಾಗೆ ಮಾತ್ರ ಕ್ರಮಕ್ರಮದಿಂದ ಅದರ ವಿಭಾಗಣೆಯಾಗುವದು. ವಿವಾಹವಾದೊಡನೆ ಅರ್ಧಭಾಗವು ಹೆಂಡತಿಯ ಸ್ವಾಧೀನವಾಗುವದು. ಮಕ್ಕಳಾಗಲು ಕಾಲುಭಾಗವು ಹಂಚಿಹೋಗುವದು. ಉಳಿದ ಕಾಲುಭಾಗವು ತಾಯಿ-ತಂದೆ, ಮಾನ-ಮರ್ಯಾದೆ, ಅನ್ನ-ವಸ್ತ್ರಾದಿ ವಿಷಯಗಳ ಕಡೆಗೆ ಗತಿಸಿ ಹೋಗುವದು. ಭಗವಂತನ ಕಡೆಗೆ ಮಾತ್ರ ಶೂನ್ಯ ಭಾಗವು ಉಳಿಯುವದು. ಆದುದರಿಂದ ಸಾಧಕನು ಬಾಲ್ಯದಲ್ಲಿಯೇ ಭಗವಚ್ಚಿಂತನೆಯ ಕಡೆಗೆ ಮನಸ್ಸು ತೊಡಗಿಸಬೇಕು. ಅಂದರೇ ಮುಂದೆ ಅವನು ಸಾಧನಾಧಿಕಾರಿಯಾಗುವನು.

(೨) ಚಿಕ್ಕತನದಲ್ಲಿ ಬೆತ್ತವನ್ನು ಬೇಕಾದಹಾಗೆ ಮಣಿಸಬಹುದು; ಆದರೆ ದೊಡ್ಡದಾದ ಬಳಿಕ ಮಾತ್ರ ಅದನ್ನು ಮನಬಂದಂತೆ ಮಣಿಸಹೋದರೆ ಮುರಿದು ಹೋಗುವದು. ಇದರಂತೆ ಬಾಲ್ಯದಲ್ಲಿ ಮನುಷ್ಯನ ಮನಸ್ಸು ಸ್ವಲ್ಪ ಪ್ರಯತ್ನ ಬಟ್ಟರೆ ಸಾಕು; ಭಗವಚ್ಚರಣದಲ್ಲಿ ಲೀನವಾಗುವದು; ಆದರೆ ವಾರ್ಧಕ್ಯದಲ್ಲಿ ಹಿರಪ್ರಯತ್ನಬಟ್ಟರೂ ಈ ಕೆಲಸವು ಅಸಾಧ್ಯವು.

(೩) ಸೂರ್ಯೋದಯದ ಪೂರ್ವದಲ್ಲಿ ಮಸರು ಕಡೆದರೆ ಉತ್ತಮವಾದ ಬೆಣ್ಣೆ ಹೊರಡುವದು; ಆದರೆ ಹೊತ್ತು ಏರಿದ ಹಾಗೆ ಕಡಿಯ ತೊಡಗಿದರೆ ಮಾತ್ರ ಸೊಗಸಾದ ಬೆಣ್ಣೆಯು ಹೊರಡದು. ಇದರಂತೆ ಬಾಲ್ಯವಯಸ್ಸಿನಲ್ಲಿ ಯಾವನು ಭಗವಚ್ಚಿಂತನೆಯಲ್ಲಿ ಆಸಕ್ತನಾಗುವನೋ ಅವನು ಈಶ್ವರಲಾಭವನ್ನು ಸುಲಭವಾಗಿ ಪಡೆಯುವನು. ಉಳಿದವರ ಮಾತು ಮಾತ್ರ ಹೀಗಲ್ಲ.

(೪) ಕೊಡತುಂಬ ಹಾಲಲ್ಲಿ ಒಂದು ಥಾಲಿ ನೀರಿದ್ದರೆ ಅದನ್ನು ಅಟ್ಟಿಸಿ ಖೀರುಮಾಡಲು ಅಲ್ಪ ಶ್ರಮವೂ ಸ್ವಲ್ಪ ಅಗ್ನಿಯೂ ಸಾಕು. ಅದೇ ತಂಬಿಗೆ ನೀರಿದ್ದರೆ ಇದಕ್ಕಿಂದ ಹೆಚ್ಚು ಶ್ರಮವೂ ಹೆಚ್ಚು ಅಗ್ನಿಯೂ ಬೇಕು. ಬಂದಿಗಿ ನೀರಿನ ಭಾಗವಿದ್ದರಂತೂ ಮೊದಲಿಗಿಂತ ಎಷ್ಟೋ ಪಾಲು ಬಹಳ ಶ್ರಮವೂ ಬಹಳ ಅಗ್ನಿಯೂ ಬೇಕು. ಇದೇ ಮೇರೆಗೆ ಬಾಲತ್ವದಲ್ಲಿ ಮನಸ್ಸಿಗೆ ವಿಷಯ ವಾಸನೆಯ ಲೇಪವು ತೀರ ಕಡಿಮೆಯಿರುವದರಿಂದ ಭಗವದ್ಭಕ್ತಿಯು ಸುಲಭ ವಾಗಿ ಜನಿಸುತ್ತದೆ. ಅದೇ ದಿನಗಳಾಗಹತ್ತಿ ವಾರ್ಧಿಕ್ಯಕ್ಕೀಡಾದನೆಂದರೆ ನಾನಾ ತರದ ವಿಷಯವಾಸನೆಯಿಂದ ಕೂಡಿದ ಅವನಿಗೆ, ಭಗವಂತನ ಕಡೆಗೆ ಮನಸ್ಸಿಡಲು ಮೊದಲಿನಷ್ಟು ಸುಲಭಸಾಧ್ಯವಾಗಲಾರದು.

---

## ೭. ಸಾಧಕರ ಸ್ವರೂಪ.

೧ ಒಬ್ಬನೇ ಮನುಷ್ಯನು ಬೇರೆ ಬೇರೆ ಜನರಿಗೆ ಅಣ್ಣ, ತಮ್ಮ, ತಂದೆ, ಅಜ್ಜ, ಮಾವ ಮೊದಲಾದ ಸ್ವರೂಪದಲ್ಲಿ ಕಾಣುತ್ತಿದ್ದರೂ, ಅವನ ಇರತಕ್ಕ ರೂಪವು ಒಂದೇ; ಆದರೆ ಸಂಬಂಧ ಭೇದದಿಂದ ಅವನು ಬೇರೆ ಬೇರೆ ಜನರಿಗೆ ಬೇರೆ ಬೇರೆ ತರನಾಗಿ ಕಾಣುವನು. ಇದರಂತೆ ಭಗವಂತನು ಒಂದೇ ಒಂದು ಸಚ್ಚಿದಾನಂದ ಸ್ವರೂಪದಲ್ಲಿರುತ್ತಿದ್ದರೂ, ಬೇರೆ ಬೇರೆ ಪ್ರಕಾರದ ಸಾಧಕರು ದಾಸ್ಯ, ಸಖ್ಯ, ವಾತ್ಸಲ್ಯ, ಶಾಂತ ಮೊದಲಾದ ರೀತಿಯಿಂದ ಅವನನ್ನು ಭಜಿಸುವರು.

೨ ಮನಸ್ಸಿನಂತೆ ಮಹಾದೇವನು. ಯಾವನ ಇಚ್ಛೆಯು ಹ್ಯಾಗೆ ಇರು ವದೋ ಹಾಗೆ ಅವನಿಗೆ ಭಗವಂತನಿಂದ ಪ್ರಾಪ್ತಿಯಾಗುವದು. ನಾವು ಧನ ಕನಕಾದಿ ವಿಷಯಸುಖಗಳನ್ನಿಚ್ಛಿಸುವ ಸಾಧಕರಾದರೆ ದೇವರು ಇಷ್ಟನ್ನೇ ನಮಗೆ ಕೊಡುವನು. ನಶ್ವರವಾದ ಇವುಗಳನ್ನು ತುಚ್ಛೀಕರಿಸಿ, ಭಗವತ್ಪ್ರಾಪ್ತಿಯು

ಖರೇ ಧ್ಯೇಯವನ್ನು ಇಟ್ಟುಕೊಂಡು ನಾವು ಖರೇ ಸಾಧಕರಾದರೆ ನಮಗೆ ನಿಜವಾಗಿಯೂ ತನ್ನ ಸಾನ್ನಿಧ್ಯವನ್ನೀಯುವನು.

೩ ರಾಜದ್ವಾರಕ್ಕೆ ಭಿಕ್ಷೆಗೆ ಹೋಗಿ ರೊಟ್ಟಿಯ ತುಣುಕಿನ ಭಿಕ್ಷೆ ಬೇಡುವದು ಹೇಗೆ ಮೂರ್ಖತನವೋ ಹಾಗೆ ಜಗದೊಡೆಯನಾದ ಭಗವಂತನ ಬಾಗಿಲಕ್ಕೆ ಹೋಗಿ ಭಕ್ತಿ-ಜ್ಞಾನ-ವೈರಾಗ್ಯಾದಿ ದುರ್ಲಭ ರತ್ನಗಳ ಇಚ್ಛೆಯನ್ನು ತೋರ್ಪಡಿಸದೆ ವಿಷಯಸುಖದ ತುಚ್ಛ ವಾಸನೆಯನ್ನು ಮುಂದೆ ಮಾಡುವದು ಮಹಾ ಮೂರ್ಖತನವು.

೪ ಸಾಧಕರಲ್ಲಿ ಗುಪ್ತ ಹಾಗು ವ್ಯಕ್ತರೆಂದು ಎರಡು ಪ್ರಕಾರಗಳು; ಗುಪ್ತಸಾಧಕರು ಯಾವಾಗಲೂ ಗುಪ್ತವಾಗಿಯೇ ಭಗವದ್ಧ್ಯಾನದಲ್ಲಿ ಮಗ್ನರಾಗಿರುವರು. ಭಗವಂತನ ಸಾನ್ನಿಧ್ಯವನ್ನು ಯಾರೂ ಅರಿಯದಂತೆ ಇವರು ಹೊಂದುವರು. ಇವರ ಆಯುಷ್ಯಕ್ರಮಣದ ರೀತಿಯು ಅನ್ಯರಿಗೆ ತಿಳಿಯುವದು ಸುಲಭವಿರುವದಿಲ್ಲ; ಆದರೆ ವ್ಯಕ್ತಸಾಧಕರ ಮಾತು ಹೀಗಲ್ಲ; ಇವರು ಯೋಗದಂಡಾದಿ ಬಾಹ್ಯಚಿಹ್ನಗಳನ್ನು ಧರಿಸುವರು. ಜನರಲ್ಲೆಲ್ಲ ಪ್ರಕಟವಾಗಿ ತಮ್ಮ ಕಾರ್ಯಮಾಡುತ್ತ ಭಗತ್ಸೇವೆಯನ್ನು ಪೂರ್ಣಗೊಳಿಸಿಕೊಳ್ಳುವರು.

---

## ೮ ಭಕ್ತಿಭಾವ.

೧ ಭಗವಚ್ಚರಣದಲ್ಲಿ ಯಾವನ ಭಕ್ತಿಭಾವವು ದೃಢವಾಗಿರುವದೋ ಅವನಿಗೆ ಭಗವಂತನ ನಾಮೋಚ್ಚಾರಣೆ ಮಾಡಿದೊಡನೆ ನೇತ್ರಗಳಲ್ಲಿ ಆನಂದಾಶ್ರುಗಳು ಉದುರುವವು. ಮೈಮೇಲೆ ರೋಮಾಂಚಗಳು ಏಳುವವು. ದೇಹದ ಮೇಲೆ ಪರಿವೆಯು ಸಹ ಇಲ್ಲದಾಗುವದು; ಆದರೆ ಉಳಿದವರ ಮಾತು ಹೀಗಲ್ಲ.

೨ ಶ್ರೀರಾಮಚಂದ್ರನಲ್ಲಿ ಅನನ್ಯ ಭಕ್ತಿಯುಳ್ಳ ಅಹಲ್ಯೆಯು ಒಮ್ಮೆ ಪ್ರಭುವನ್ನು ಕುರಿತು ಪ್ರಾರ್ಥಿಸಿದ್ದೇನಂದರೆ—"ಭಕ್ತಾಭಿಮಾನಿಯಾದ ಶ್ರೀರಾಮಚಂದ್ರನೇ, ನನಗೆ ಸೂಕರ ಯೋನಿಯಲ್ಲಿ ಜನ್ಮವಿತ್ತರೂ ಅಡ್ಡಿಯಿಲ್ಲ; ಆದರೆ ನಿನ್ನ ಪಾದಕಮಲಗಳಲ್ಲಿ ಮಾತ್ರ ನನಗೆ ಅಚಲ ಶ್ರದ್ಧೆಯನ್ನೂ ಭಕ್ತಿಯನ್ನೂ ದಯಪಾಲಿಸು; ಉಳಿದುದೇನೂ ಬೇಡ."

---

## ೯ ಧ್ಯಾನ.

೧ ಭಗವಂತನಲ್ಲಿ ತನ್ಮಯನಾಗಿ ಅವನ ಧ್ಯಾನ ಮಾಡಬೇಕು. ಆಗ ದೇಹಾ

ಭಿಮಾನವು ಎಳ್ಳಷ್ಟಾದರೂ ಇರಲಾಗದು. ಇದೇ ನಿಜವಾದ ಧ್ಯಾನವು. ಶ್ರೀ ರಾಮಕೃಷ್ಣ ಪರಮಹಂಸರು ಕಾಲೀಮಾತೆಯ ದೇವಾಲಯದಲ್ಲಿ ಧ್ಯಾನಸ್ಥರಾಗಿ ಕುಳಿತರೆಂದರೆ, ಗುಬ್ಬಿಗಳೂ ಹಕ್ಕಿಪಕ್ಕಿಗಳೂ ಇವರ ಮೇಲೆ, ಕುಳಿತು-ಕುಳಿತು ಹೋಗುತ್ತಿದ್ದವಂತೆ;

೨ ಖರೇಸಾಧಕನು ಧ್ಯಾನದಲ್ಲಿ ಮಗ್ನನಾದನೆಂದರೆ, ಅವನು ನಡುನಡುವೆ ಒಂದು ಪ್ರಕಾರದ ನಿದ್ರೆಗೆ ಈಡಾಗುವನು. ಈ ನಿದ್ರೆಗೇ ಜ್ಞಾನಿಗಳು ಯೋಗ ನಿದ್ರೆಯೆಂದೆನ್ನುವರು. ಅನೇಕ ಸಾಧಕರು ಈ ಅವಸ್ಥೆಯಲ್ಲಿಯೇ ಭಗವಂತನ ದರ್ಶನಲಾಭವನ್ನು ಪಡೆಯುವರು.

---

## ೧೦ ಭಗವತ್ಕೃಪೆ.

೧ ಒಂದು ಮನೆಯಲ್ಲಿ ಕತ್ತಲೆಯು ಸಾವಿರಾರು ವರ್ಷಗಳಿಂದಿರುತ್ತಿದ್ದರೂ ಬೆಂಕಿಯಕಡ್ಡಿಯನ್ನು ಒಮ್ಮೆ ಕೆರೆದಮಾತ್ರದಿಂದ ಎಲ್ಲ ಕತ್ತಲೆಯು ಬಯಲಾಗಿ ಪ್ರಕಾಶ ಬೀಳುವಂತೆ ಭಗವಂತನ ಕೃಪಾಮಾತ್ರದಿಂದ ಜೀವಾತ್ಮನ ಅನಂತ ಜನ್ಮಗಳ ದುರಿತವು ದೂರಾಗುವದು.

೨ ಮೈ ಹುಡಿಮಾಡಿಕೊಳ್ಳುತ್ತ ಮಣ್ಣಿನಲ್ಲಿ ಆಡುವದು, ಮಕ್ಕಳ ಸ್ವಭಾವಸಿದ್ಧಧರ್ಮವೇ ಆಗಿರುವದು. ಆದರೆ ಹಡೆದವರು ಇದನ್ನು ಕಂಡೊಡನೆ ಮೈ ಯೊರಿಸಿ ಸ್ವಚ್ಛ ಮಾಡದೆ ಇರರು. ಇದರಂತೆ ಈ ಮಾಯಾಮಯ ಸಂಸಾರದಲ್ಲಿ ಶಿಲುಕಿ ಜೀವಿಗಳು ಎಷ್ಟು ಮಾಲಿನ್ಯವನ್ನು ಹೊಂದಿದ್ದರೂ ಭಗವಂತನು ಇವರ ಶುದ್ಧಿಗಾಗಿ ಟೊಂಕಕಟ್ಟಿಯೇ ನಿಂತಿರುವನು.

---

## ೧೧ ಸಿದ್ಧಾವಸ್ಥೆ.

೧ ಸ್ಪರ್ಶಮಣಿಯ ಸ್ಪರ್ಶದಿಂದ ಕಬ್ಬಿಣವು ಒಮ್ಮೆ ಬಂಗಾರವಾಯಿತೆಂದರೆ, ತಿರುಗಿ ಅದನ್ನು ಮಣ್ಣಲ್ಲಿ ಅಥವಾ ತಿಪ್ಪಿಯಲ್ಲಿ ಬೇಕಾದ . ಹಾಗೆ ಹುಗಿದಿಡಿರಿ; ಅಥವಾ ಒಗೆಯಿರಿ. ಅದರಲ್ಲಿ ಹೇಗೆ ಸ್ಥಿತ್ಯಂತರವಾಗುವದಿಲ್ಲವೋ ಹಾಗೆ ಜೀವಾತ್ಮನಿಗೆ ಒಮ್ಮೆ ಭಗವತ್ಕೃಪೆಯಾಯಿತೆಂದರೆ ತೀರಿತು. ಅವನು ಪುನಃ ಸಂಸಾರದಲ್ಲಿರಲಿ, ಅಡವಿಯಲ್ಲಿರಲಿ; ಯಾವ ದೋಷವೂ ಅವನಿಗೆ ತಟ್ಟಲಾರದು.

೨ ಶ್ರೀರಾಮಕೃಷ್ಣಪರಮಹಂಸರು ಒಮ್ಮೆ ತಮ್ಮ ದೇಹದ ಕಡೆಗೆ

ಬೆರಳು ಮಾಡಿ ಅಂದದ್ದೇನಂದರೆ:—"ಈ ಶರೀರವು ಒಬ್ಬ ಯಜಮಾನನ ಮನೆಯಂತಿರುವದು. ಪರಬ್ರಹ್ಮಸ್ವರೂಪ ಜನನಿಯು ಇದರಲ್ಲಿ ಕುಳಿತು ಲೀಲೆ ತೋರಿಸುತ್ತಿರುವಳು."

೩ ಈ ಸಂಸಾರದಲ್ಲಿ ಸ್ವಪ್ನಸಿದ್ಧಿಗಳು, ಮಂತ್ರಸಿದ್ಧಿಗಳು, ಹಟತ್ಸಿದ್ಧಿಗಳು, ನಿತ್ಯಸಿದ್ಧಿಗಳೆಂದು ತರತರದ ಸಿದ್ಧಾವಸ್ಥೆಯನ್ನು ಪಡೆದವರಿರುವರು. ಇವರಲ್ಲಿ ಸ್ವಪ್ನಸಿದ್ಧಿಗಳಿಗೆ ಸ್ವಪ್ನದಲ್ಲಿ ಇಷ್ಟಮಂತ್ರದ ಲಾಭ ದೊರೆಯುವದು. ಮಂತ್ರಸಿದ್ಧಿಗಳು ಸದ್ಗುರುವಿನಿಂದ ಮಂತ್ರಗ್ರಹಣಮಾಡಿ ಸಾಧನದ ದ್ವಾರದಿಂದ ಸಿದ್ಧರಾಗಿರುತ್ತಾರೆ. ಹಟತ್ಸಿದ್ಧಿಗಳು ದೈವಯೋಗದಿಂದ ಯಾವನೊಬ್ಬ ಮಹತ್ಪುರುಷನ ಕೃಪೆಗೆ ಪಾತ್ರರಾಗಿ ಸಿದ್ಧಿಯನ್ನು ಪಡೆದವರಿರುತ್ತಾರೆ. ನಿತ್ಯಸಿದ್ಧಿಗಳು ಬಾಲ್ಯಾವಸ್ಥೆಯಿಂದಲೇ ಧರ್ಮಸ್ಥಾನದಲ್ಲಿ ಚಿತ್ತವಿಟ್ಟು ಸಿದ್ಧರಾದವರು. ಕೂಷ್ಮಾಂಡ ಲತೆಗೆ ಮೊದಲು ಫಲವಂಕುರಿಸಿ ಅನಂತರ ಪುಷ್ಪದೋರುವಂತೆ ಇವರ ಸ್ಥಿತಿಗತಿಯು.

೪ ಸಮುದ್ರದಲ್ಲಿ ಹಡಗವು ಬೇಕಾದತ್ತ ಸಾಗಿದ್ದರೂ, ಅದರಲ್ಲಿಯ ಹೋಕಾಯಂತ್ರದ ಮುಳ್ಳು ಯಾವಾಗಲೂ ಉತ್ತರದಿಕ್ಕಿನ ಕಡೆಗೇ ಇರುವದು. ಇದರಿಂದ ನಾವಿಕರಿಗೆ ತುಂಬಾ ಅನುಕೂಲವು. ಇದರಂತೆ ಸಂಸಾರಸಾಗರದಲ್ಲಿ ಮನುಷ್ಯನ ಮನಸ್ಸು ಅನೇಕ ಕಡೆಗೆ ಇರುತ್ತಿದ್ದರೂ, ಅವನ ಒಲವು ಭಗವಂತನ ಕಡೆಗಿರುತ್ತಿದ್ದರೆ ಅವನಿಗಾವ ಭಯವೂ ಇಲ್ಲ.

೫ ಹಾಲು ನೀರು ಮಿಶ್ರಿತ ಪಾತ್ರೆಯಲ್ಲಿ ಹಂಸವು ಹಾಲನ್ನೇ ಪರಿಗ್ರಹಿಸುವದು. ಪರಮಹಂಸನು ಈ ಸಾರ ನಿಸ್ಸಾರ ಸಂಸಾರದಲ್ಲಿ ಭಗವಂತನ ಸಚ್ಚಿದಾನಂದ ಸಾರವನ್ನೇ ಗ್ರಹಣಮಾಡುವವನು.

---

## ಪರಮಹಂಸರ ವಿವಿಧ ವಿಚಾರತರಂಗ.

೧ ಮನಸ್ಸೇ, ನೀನು ಸ್ವತಂತ್ರನಿರುವದಿಲ್ಲ. ಕಾರಣ ಪ್ರೇರಣೆಯನ್ನು ತಾಳಿ ನಡೆ; ದೇವರಿಂದ ಪ್ರಾಪ್ತವಾದ ನಿನ್ನ ದುರ್ಲಭ ಸಾಮರ್ಥ್ಯದ ಅಪವ್ಯಯವನ್ನು ಮಾಡಿಕೊಳ್ಳಬೇಡ. ಪರರ ದೋಷವೆಣಿಸಬೇಡ; ನಿರ್ದೋಷಿಯಾಗಿರು; ಪವಿತ್ರನಾಗಿರು; ನಾಮಜಪವನ್ನು ಸತತವಾಗಿಮಾಡು. ಸ್ಥಿರಶಾಂತಿಯನ್ನು ದೊರಕಿಸಲಿಕ್ಕೆ ಪ್ರಯತ್ನಿಸು; ದುಡ್ಡಿನ ಜಮಾಖರ್ಚಿನಂತೆ ವೇಳೆಯ ಜಮಾಖರ್ಚನ್ನೂ ಇಡು.

ಪ್ರತಿಯೊಬ್ಬನು ದಿನಾಲು ರಾತ್ರಿ ಮಲಗುವಾಗ ಆತ್ಮಪರೀಕ್ಷಣವನ್ನು
..ದ್ದು. ಪರರಿಂದ ಕಷ್ಟವುಂಟಾಗಹತ್ತಿದೊಡನೆ ಮೊದಲು ಸ್ವಂತ
ವಿಷಯವಾಗಿ ವಿಚಾರಿಸತಕ್ಕದ್ದು.

ಸರ್ವ ಸ್ತ್ರೀಯರು ದೇವಿಯ ಅಂಶರೆಂದೂ, ಮಾತೃಸ್ವರೂಪರೆಂದೂ
..ಣಿಯತಕ್ಕದ್ದು ಇದೇ ಭಗವತೀ ಕಾಳಿಕಾಮಾತೆಯ ದೊಡ್ಡ ಪೂಜೆಯು.

ಈಶ್ವರನ ಜ್ಞಾನಕ್ಕೆ ಅಂತ್ಯವಿಲ್ಲ. ಅವನು ನಮಗೆ ಹಿತವಾದುದನ್ನೇ
..ನು; ಆದರೆ ಅದನ್ನು ತಿಳಿಯುವ ಸಾಮರ್ಥ್ಯವು ಮಾತ್ರ ನಮಗಿರುವ
..ೀವರು ಅನ್ಯಾಯ ಮಾಡಿದನೆಂದು ನಾವು ಅವನಿಗೆ ದೋಷವನ್ನೀಯು
..ದರೆ ಅವನ ದೋಷವನ್ನೆಣಿಸಲು ನಾವೆಷ್ಟು ಯೋಗ್ಯತೆಯುಳ್ಳವರು?
..ಾರವನ್ನು ಮಾತ್ರ ನಾವು ಮಾಡುವದಿಲ್ಲ.

ಭಗವಂತನಿಗೆ ಶರಣುಹೋಗು. ಅಂದರೆ ನೀನು ಪಾರಾಗುವಿ; ಅವನು
..ಪಿಯೂ, ಪರೋಪಕಾರಿಯೂ ಇರುವದರಿಂದ ನಿನ್ನಲ್ಲಿ ಈ ಗುಣಗಳ
ಅವನ ಪ್ರೀತಿಗೆ ನೀನು ಪಾತ್ರನಾಗುವಿ; ಇಲ್ಲವಾದರೆ ಏನು ಮಾಡಿ
..ರ್ಥವು.

ಪರಮಾತ್ಮನು ಜಾತಿ ಧರ್ಮ ಪಂಥಗಳನ್ನಾವನ್ನೂ ನೋಡನು.
..ಿಂದ ಸ್ವಚ್ಛವಾದ ಕೈ, ಈಶ್ವರನ ಭಜನ-ಕೀರ್ತನೆಗಳಿಂದ ಪವಿತ್ರ
..ುಖ, ಪರೋಪಕಾರದ ವಿಚಾರಗಳಿಂದ ನಿಷ್ಕಲಂಕವಾದ ಹೃದಯ
ಭಕ್ತರೊಡನೆ ಸಹಭೋಜನಕ್ಕೆ ಸಹ ಅವನು ಬರುವನು.

ವಿಷಯಲಾಭ, ಪುತ್ರಪ್ರಾಪ್ತಿ, ಮಾನ-ಮರ್ಯಾದೆಗಳ ಅಭಿಲಾಷೆ
..ಶ್ವರಾರಾಧನೆಗೆ ತೊಡಗಬೇಡಿರಿ. ಕೇವಲ ಸಚ್ಚಿದಾನಂದ ಪ್ರಾಪ್ತಿಯ
..ೇ ಇಟ್ಟುಕೊಂಡು ನಡೆದರೆ ಅವನೆಂದೂ ನಿಮ್ಮನ್ನು ನಿರಾಶೆಗೊಳಿಸನು.



## ಪರಮಹಂಸರ ಪ್ರಾರ್ಥನಾಂಜಲಿ.

"ದೇವಾ, ಸಂಕಟಸಮಯದಲ್ಲಿ ರಕ್ಷಿಸಲು ಬಾಯೆಂದು
ನಿನ್ನನ್ನು ಪ್ರಾರ್ಥಿಸುವದಿಲ್ಲ. ಆದರೆ ಪ್ರಾಪ್ತವಾದ ಆ ಸಂಕಟದಿಂ
ತಟ್ಟದಂತೆ ಅನುಗ್ರಹಿಸು. ದುಃಖಶೋಕದಿಂದ ಪೂರಿತವಾದ ನನ್ನ
ನೀನು ಸಾಂತ್ವನಗೊಳಿಸದಿದ್ದರೂ ಅಡ್ಡಿ ಇಲ್ಲ. ಆದರೆ ಆ ದುಃಖ
ಮಾಡುವ ಸಾಮರ್ಥ್ಯವನ್ನು ಮಾತ್ರ ನನಗೆ ದಯಪಾಲಿಸು.
ಮೂಲಕ ಸಂಸಾರದಲ್ಲಿ ನನಗೆ ಬೇಕಾದಷ್ಟು ತೊಂದರೆಗಳು ಬ
ದಷ್ಟು ಜನರು ನನ್ನನ್ನು ದೂರೀಕರಿಸಲಿ; ಆದರೆ ನೀನು ನನ್ನ ಮನ
ವನ್ನು ಮಾತ್ರ ಕಡಿಮೆಯಾಗಗೊಡದಿರು; ನನ್ನನ್ನೇ ಉದ್ಧಾರವ
ಎಂದು ಪ್ರಾರ್ಥನೆ ಗೈದು, ನಿನಗೆಂದೂ ನಾನು ಶ್ರಮಗೊಡುವದಿ
ನೀನು ನನ್ನಲ್ಲಿತ್ತ ಸ್ವೋದ್ಧಾರದ ಸಾಮರ್ಥ್ಯವು ಮಾತ್ರ ಜಾಗ್ರತ
ಸುಖದ ಶುಭದಿವಸಗಳು ಪ್ರಾಪ್ತವಾದೊಡನೆ ಲೀನವಾಗಿ ನಿನ್ನನ್ನು
ವಂತೆ ನನಗೆ ನಿನ್ನ ಆಶೀರ್ವಾದವಿರಲಿ; ದುಃಖಪ್ರಾಪ್ತಿಯಾಗಿರಲು ನ
ದಲ್ಲಿ ಅಥವಾ ಎಲ್ಲೆಡೆಯಲ್ಲಿ ಅಜ್ಞಾನದ ಅಂಧಃಕಾರವೆಸಗಿದಾಗ ನಿ
ಬಗ್ಗೆ ನನ್ನಲ್ಲಿ ಸಂಶಯವು ಉದ್ಭವಿಸದಂತೆ ಎಚ್ಚರಿಸು; ಇಷ್ಟೇ
ರ್ಥನೆಯು."

|| ಸರ್ವೇಜನಾಃ ಸುಖಿನೋಭವಂತು ||

|| ಸಮಾಪ್ತ. ||

---

